

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | 171 |
| ಮಾನ್ಯ ಸದಸ್ಯರ ಹೆಸರು | ಶ್ರೀ ಅಪ್ಪಚ್ಚು (ರಂಜನ್) ಎಂ.ಪಿ. |
| ಉತ್ತರಿಸುವ ಸಚಿವರು | ಉಪ ಮುಖ್ಯಮಂತ್ರಿಗಳು (ಉನ್ನತ ಶಿಕ್ಷಣ) |
| ಉತ್ತರಿಸಬೇಕಾದ ದಿನಾಂಕ | 24-09-2020 |

| ಪ್ರಶ್ನೆ | | ಉತ್ತರ |
|---|---|---|
| (ಅ) | ರಾಜ್ಯದಲ್ಲಿ ಎಷ್ಟು ವಿಶ್ವವಿದ್ಯಾಲಯಗಳಿವೆ; ಅವುಗಳು ಯಾವುವು; ಯಾವ ವಿಶ್ವವಿದ್ಯಾಲಯಕ್ಕೆ ಯಾವ ಕಾಲೇಜು ಕಾಲೇಜುಗಳು ಸೇರ್ಪಡೆಗೊಂಡಿವೆ; ಯಾವ ವರ್ಗ; ವಿಷಯವಾರು ವಿಶ್ವವಿದ್ಯಾಲಯಗಳನ್ನು ಸ್ಥಾಪಿಸಲಾಗಿದೆ; (ಕ್ಷೇತ್ರವಾರು ಪೂರ್ಣ ವಿವರ ನೀಡುವುದು) | ರಾಜ್ಯದಲ್ಲಿ ಒಟ್ಟು ಉನ್ನತ ಶಿಕ್ಷಣ ಇಲಾಖೆಯ ವ್ಯಾಪ್ತಿಯಡಿಯಲ್ಲಿ 20 ಸಾರ್ವಜನಿಕ ವಿಶ್ವವಿದ್ಯಾಲಯಗಳು ಕಾರ್ಯನಿರ್ವಹಿಸುತ್ತಿವೆ. ವಿವರಗಳು ಈ ಕೆಳಕಂಡಂತಿವೆ. |

| ಕ್ರ.ಸಂ. | ವಿಶ್ವವಿದ್ಯಾಲಯದ ಹೆಸರು | ಒಳಗೊಂಡಿರುವ ಕಾಲೇಜುಗಳ ವಿವರ |
|---|---|---|
| 1 | ಬೆಂಗಳೂರು ವಿಶ್ವವಿದ್ಯಾಲಯ | ಬೆಂಗಳೂರು ಜಿಲ್ಲೆಯ ವಿಜಯನಗರ, ಪದ್ಮನಾಭನಗರ, ಬೊಮ್ಮನಹಳ್ಳಿ, ಆನೇಕಲ್, ಬೆಂಗಳೂರು ದಕ್ಷಿಣ ಯಶವಂತಪುರ, ರಾಜರಾಜೇಶ್ವರಿನಗರ, ದಾಸರಹಳ್ಳಿ, ಮಹಾಲಕ್ಷ್ಮಿಲೇಔಟ್ ಮತ್ತು ಗೋವಿಂದರಾಜನಗರ, ಬೆಂಗಳೂರು ಗ್ರಾಮಾಂತರ ಜಿಲ್ಲೆಯ ನೆಲಮಂಗಲ, ರಾಮನಗರ ಜಿಲ್ಲೆಯ ಮಾಗಡಿ, ರಾಮನಗರ, ಕನಕಪುರ, ಚನ್ನಪಟ್ಟಣ ಪ್ರದೇಶಗಳಲ್ಲಿನ ಸ್ನಾತಕ/ಸ್ನಾತಕೋತ್ತರ ಕಾಲೇಜುಗಳು |
| 2 | ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯ | ರಾಜ್ಯದಲ್ಲಿರುವ ಎಲ್ಲಾ ಸಂಸ್ಕೃತ ಕಾಲೇಜುಗಳು |
| 3 | ರಾಣಿ ಚೆನ್ನಮ್ಮ | ಬೆಳಗಾವಿ, ಬಾಗಲಕೋಟೆ, ವಿಜಯಪುರ ಜಿಲ್ಲೆಯಲ್ಲಿರುವ ಸ್ನಾತಕ/ಸ್ನಾತಕೋತ್ತರ ಕಾಲೇಜುಗಳು |
| 4 | ವಿಜಯನಗರ ಶ್ರೀಕೃಷ್ಣದೇವರಾಯ ವಿಶ್ವವಿದ್ಯಾಲಯ | ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲೆಯಲ್ಲಿರುವ ಸ್ನಾತಕ/ಸ್ನಾತಕೋತ್ತರ ಕಾಲೇಜುಗಳು |
| 5 | ತುಮಕೂರು ವಿಶ್ವವಿದ್ಯಾಲಯ | ತುಮಕೂರು ಜಿಲ್ಲೆಯಲ್ಲಿರುವ ಸ್ನಾತಕ/ಸ್ನಾತಕೋತ್ತರ ಕಾಲೇಜುಗಳು |
| 6 | ಕುವೆಂಪು ವಿಶ್ವವಿದ್ಯಾಲಯ | ಶಿವಮೊಗ್ಗ ಮತ್ತು ಚಿಕ್ಕಮಗಳೂರು ಜಿಲ್ಲೆಯಲ್ಲಿರುವ ಸ್ನಾತಕ/ಸ್ನಾತಕೋತ್ತರ ಕಾಲೇಜುಗಳು |
| 7 | ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯ | ರಾಜ್ಯದಲ್ಲಿರುವ ಎಲ್ಲಾ ತಾಂತ್ರಿಕ ಕಾಲೇಜುಗಳು |
| 8 | ಮೈಸೂರು ವಿಶ್ವವಿದ್ಯಾಲಯ | ಮೈಸೂರು, ಮಂಡ್ಯ, ಹಾಸನ, ಚಾಮರಾಜನಗರ ಜಿಲ್ಲೆಯಲ್ಲಿರುವ ಸ್ನಾತಕ/ಸ್ನಾತಕೋತ್ತರ ಕಾಲೇಜುಗಳು |
| 9 | ಕರ್ನಾಟಕ ವಿಶ್ವವಿದ್ಯಾಲಯ | ಧಾರವಾಡ, ಗದಗ, ಹಾವೇರಿ, ಉತ್ತರ ಕನ್ನಡ ಜಿಲ್ಲೆಯಲ್ಲಿರುವ ಸ್ನಾತಕ/ಸ್ನಾತಕೋತ್ತರ ಕಾಲೇಜುಗಳು |
| 10 | ಗುಲ್ಬರ್ಗ ವಿಶ್ವವಿದ್ಯಾಲಯ | ಕಲಬುರಗಿ ಮತ್ತು ಬೀದರ್ ಜಿಲ್ಲೆಯಲ್ಲಿರುವ ಸ್ನಾತಕ/ಸ್ನಾತಕೋತ್ತರ ಕಾಲೇಜುಗಳು |
| 11 | ಮಂಗಳೂರು ವಿಶ್ವವಿದ್ಯಾಲಯ | ದಕ್ಷಿಣ ಕನ್ನಡ, ಉಡುಪಿ ಮತ್ತು ಕೊಡಗು ಜಿಲ್ಲೆಯಲ್ಲಿರುವ ಸ್ನಾತಕ/ಸ್ನಾತಕೋತ್ತರ ಕಾಲೇಜುಗಳು |

| | | |
|---|---|---|
| 12 | ಅಕ್ಕಮಹಾದೇವಿ ಮಹಿಳಾ ವಿಶ್ವವಿದ್ಯಾಲಯ | ರಾಜ್ಯದಲ್ಲಿರುವ ಎಲ್ಲಾ ಮಹಿಳಾ ಪ್ರಥಮ ದರ್ಜೆ ಕಾಲೇಜುಗಳು |
| 13 | ದಾವಣಗೆರೆ ವಿಶ್ವವಿದ್ಯಾಲಯ, ದಾವಣಗೆರೆ | ದಾವಣಗೆರೆ ಮತ್ತು ಚಿತ್ರದುರ್ಗ ಜಿಲ್ಲೆಯಲ್ಲಿರುವ ಸ್ನಾತಕ/ಸ್ನಾತಕೋತ್ತರ ಕಾಲೇಜುಗಳು |
| 14 | ಬೆಂಗಳೂರು ಕೇಂದ್ರ ವಿಶ್ವವಿದ್ಯಾಲಯ | ಬೆಂಗಳೂರು ಜಿಲ್ಲೆಯ ಶಾಂತಿನಗರ, ಬ್ಯಾಟರಾಯನಪುರ ಯಲಹಂಕ, ಮಲ್ಲೇಶ್ವರಂ, ಹೆಬ್ಬಾಳ, ಶಿವಾಜಿನಗರ ಗಾಂಧಿನಗರ, ಚಾಮರಾಜಪೇಟೆ, ಚಿಕ್ಕಪೇಟೆ, ಬಸವನಗುಡಿ ಬಿಟಿಎಂ ಲೇಔಟ್, ಜಯನಗರ ಮತ್ತು ರಾಜಾಜಿನಗರ ಪ್ರದೇಶಗಳಲ್ಲಿರುವ ಸ್ನಾತಕ/ಸ್ನಾತಕೋತ್ತರ ಕಾಲೇಜುಗಳು |
| 15 | ಬೆಂಗಳೂರು ಉತ್ತರ ವಿಶ್ವವಿದ್ಯಾಲಯ | ಕೋಲಾರ ಜಿಲ್ಲೆಯ ಶ್ರೀನಿವಾಸಪುರ, ಮುಳಬಾಗಿಲು ಕೆಜಿಎಫ್, ಬಂಗಾರಪೇಟೆ, ಕೋಲಾರ, ಮಾಲೂರು. ಬೆಂಗಳೂರು ಜಿಲ್ಲೆಯ ಕೆಆರ್ ಪುರಂ. ಪುಲಿಕೇಶಿನಗರ, ಸರ್ವಜ್ಞ ನಗರ, ಸಿವಿ ರಾಮನ್ ನಗರ ಮತ್ತು ಮಹದೇವಪುರ ಹಾಗೂ ಚಿಕ್ಕಬಳ್ಳಾಪುರ ಜಿಲ್ಲೆಯ ಗೌರಿಬಿದನೂರು, ಬಾಗೇಪಲ್ಲಿ, ಚಿಕ್ಕಬಳ್ಳಾಪುರ, ಶಿಡ್ಲಘಟ್ಟ ಮತ್ತು ಚಿಂತಾಮಣಿ, ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೇವನಹಳ್ಳಿ, ದೊಡ್ಡಬಳ್ಳಾಪುರ ಮತ್ತು ಹೊಸಕೋಟೆ ಪ್ರದೇಶಗಳಲ್ಲಿರುವ ಸ್ನಾತಕ/ಸ್ನಾತಕೋತ್ತರ ಕಾಲೇಜುಗಳು. |
| 16 | ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ | ಯಾವುದೇ ಸಂಯೋಜಿತ ಕಾಲೇಜುಗಳನ್ನು ಹೊಂದಿರುವುದಿಲ್ಲ. |
| 17 | ಕರ್ನಾಟಕ ರಾಜ್ಯ ಜಾನಪದ ವಿಶ್ವವಿದ್ಯಾಲಯ | ಯಾವುದೇ ಸಂಯೋಜಿತ ಕಾಲೇಜುಗಳನ್ನು ಹೊಂದಿರುವುದಿಲ್ಲ. |
| 18 | ಕರ್ನಾಟಕ ರಾಜ್ಯ ಡಾ: ಗಂಗೂಬಾಯಿ ಹಾನಗಲ್ ಸಂಗೀತ ಮತ್ತು ಪ್ರದರ್ಶಕ ಕಲೆಗಳ ವಿಶ್ವವಿದ್ಯಾಲಯ | ಯಾವುದೇ ಸಂಯೋಜಿತ ಕಾಲೇಜುಗಳನ್ನು ಹೊಂದಿರುವುದಿಲ್ಲ. |
| 19 | ಕನ್ನಡ ವಿಶ್ವವಿದ್ಯಾಲಯ | ಯಾವುದೇ ಸಂಯೋಜಿತ ಕಾಲೇಜುಗಳನ್ನು ಹೊಂದಿರುವುದಿಲ್ಲ. |
| 20 | ರಾಯಚೂರು ವಿಶ್ವವಿದ್ಯಾಲಯ | ರಾಯಚೂರು ಮತ್ತು ಯಾದಗಿರಿ ಜಿಲ್ಲೆಯಲ್ಲಿರುವ ಸ್ನಾತಕ/ಸ್ನಾತಕೋತ್ತರ ಕಾಲೇಜುಗಳು |

ಉನ್ನತ ಶಿಕ್ಷಣವು ಸಮಾಜದ ಅವಶ್ಯಕತೆಗಳಿಗೆ ಸರಿಹೊಂದುವಂತೆ ಮಾನವ ಶಕ್ತಿಯ ಪೂರೈಕೆ, ಶಿಕ್ಷಣದ ಗುಣಮಟ್ಟದ ಸುಧಾರಣೆ, ಸಂಪನ್ಮೂಲದ ಸಂಗ್ರಹಣೆಯಲ್ಲಿ ಸ್ವಾವಲಂಬನೆ, ಶಿಕ್ಷಕ ಸಮೂಹದ ಕೊಡುಗೆಯ ನಿರ್ಧರಣೆ ಹಾಗೂ ರಾಜ್ಯದ ಎಲ್ಲಾ ಭಾಗದ ವಿದ್ಯಾರ್ಥಿಗಳಿಗೆ ಉತ್ತಮ ಗುಣಮಟ್ಟದ ಉನ್ನತ ಶಿಕ್ಷಣವನ್ನು ಸುಲಭವಾಗಿ ಒದಗಿಸಲು ಸಾಂಪ್ರದಾಯಿಕ ವಿಶ್ವವಿದ್ಯಾಲಯಗಳನ್ನು ಪ್ರಾರಂಭಿಸಲಾಗಿರುತ್ತದೆ.

ಮುಂದುವರೆದು, ದೂರ ಶಿಕ್ಷಣ ಕ್ರಮದಲ್ಲಿ ದೂರ ಸಂಪರ್ಕ ಮಾಧ್ಯಮ ಶಿಕ್ಷಣ ಪದ್ಧತಿಗೆ ಉತ್ತೇಜನ ನೀಡಲು ಹಾಗೂ ವಿವಿಧ ಮಾಧ್ಯಮಗಳ ಮೂಲಕ ಕಲಿಕೆ ಮತ್ತು ಜ್ಞಾನದ ಮುನ್ನಡೆ ಹಾಗೂ ಪ್ರಸಾರದ ಉದ್ದೇಶಕ್ಕಾಗಿ ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯವನ್ನು ಸ್ಥಾಪಿಸಲಾಗಿದೆ.

| | | |
|---|---|---|
| | | ಪ್ರಾಚೀನವಾದ ಮತ್ತು ಉಜ್ವಲವಾದ ಸಾಹಿತ್ಯ ಹಾಗೂ ಸಾಂಸ್ಕೃತಿಕ ಸಾಂಪ್ರದಾಯ ಮತ್ತು ಪರಂಪರೆಯನ್ನು ಹೊಂದಿರುವ ಕನ್ನಡ ಭಾಷೆ, ಸಾಹಿತ್ಯ ಮತ್ತು ಅಂತಹ ಕ್ಷೇತ್ರಗಳಲ್ಲಿ ಮುನ್ನಡೆಯನ್ನು ಸಾಧಿಸಲು ಮತ್ತು ಸಂಶೋಧನೆಯನ್ನು ನಡೆಸಲು ಕನ್ನಡ ವಿಶ್ವವಿದ್ಯಾಲಯವನ್ನು ಸ್ಥಾಪಿಸಲಾಗಿರುತ್ತದೆ.<br><br>ರಾಜ್ಯದಲ್ಲಿ ಸೂಕ್ತ ಹಾಗೂ ಕ್ರಮಬದ್ಧವಾದ ತಾಂತ್ರಿಕ ಶಿಕ್ಷಣ, ಬೋಧನೆ, ತರಬೇತಿ ಮತ್ತು ಸಂಶೋಧನೆಯನ್ನು ಸುನಿಶ್ಚಿತಗೊಳಿಸುವ ಉದ್ದೇಶಕ್ಕಾಗಿ ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯವನ್ನು ಸ್ಥಾಪಿಸಲಾಗಿದೆ.<br><br>ಕರ್ನಾಟಕದಲ್ಲಿ ಸಂಗೀತ ಮತ್ತು ಪ್ರದರ್ಶಕ ಕಲೆಗಳ ಕ್ಷೇತ್ರಗಳಲ್ಲಿ ಉಜ್ವಲ ಪರಂಪರೆ ಇರುವುದರಿಂದ, ಸಂಗೀತ ಮತ್ತು ಪ್ರದರ್ಶಕ ಕಲೆಗಳ ಅಧ್ಯಯನವನ್ನು ವ್ಯವಸ್ಥಿತಗೊಳಿಸುವುದಕ್ಕಾಗಿ ಹಾಗೂ ಸಂಶೋಧನೆಗಾಗಿ ಕರ್ನಾಟಕ ರಾಜ್ಯ ಡಾ: ಗಂಗೂಬಾಯಿ ಹಾನಗಲ್ ಸಂಗೀತ ಮತ್ತು ಪ್ರದರ್ಶಕ ಕಲೆಗಳ ವಿಶ್ವವಿದ್ಯಾಲಯವನ್ನು ಸ್ಥಾಪಿಸಲಾಗಿರುತ್ತದೆ.<br><br>ಸಂಸ್ಕೃತ ಭಾಷೆಯು ಅತ್ಯಂತ ಶ್ರೀಮಂತ ಭಾಷೆಯಾಗಿದ್ದು, ಪರಮಜ್ಞಾನದ ಮೂಲಾಧಾರವಾಗಿರುವ ಸಂಸ್ಕೃತ ಭಾಷೆಗೆ ಸಂಬಂಧಿಸಿದ ಕ್ಷೇತ್ರಗಳು ಮತ್ತು ವಿಷಯಗಳಲ್ಲಿ ಸಂಶೋಧನೆಗೆ ಉತ್ತೇಜನ ನೀಡಲು ಸಂಸ್ಕೃತ ಸಂಸ್ಥೆಗಳಲ್ಲಿ ನಡೆಯುವ ಸಂಸ್ಕೃತ ಅಧ್ಯಯನವನ್ನು ವ್ಯವಸ್ಥಿತಗೊಳಿಸಲು, ಸಂಸ್ಕೃತ ಮತ್ತು ಕನ್ನಡ ಭಾಷೆಯ ನಡುವೆ ಇರುವ ಸುಸಂಬಂಧವನ್ನು ಬಳಸಿಕೊಳ್ಳಲು, ಸಂಸ್ಕೃತ ಭಾಷಾ ವಿದ್ವಾಂಸರು ಹಾಗೂ ತತ್ಸಂಬಂಧಿತ ವಿದ್ಯಾವಿಷಯಗಳ ವಿದ್ವಾಂಸರುಗಳ ನಡುವೆ ವಿಚಾರ ಹಾಗೂ ಪಾಂಡಿತ್ಯ ವಿನಿಮಯಕ್ಕೆ ವೇದಿಕೆ ಕಲ್ಪಿಸಲು ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯವನ್ನು ಸ್ಥಾಪಿಸಲಾಗಿದೆ.<br><br>ಕರ್ನಾಟಕ ಜಾನಪದ ಅದರಲ್ಲೂ ವಿಶೇಷವಾಗಿ ಜಾನಪದ ಸಂಸ್ಕೃತಿಯಲ್ಲಿ ಶ್ರೀಮಂತರಾಗಿರುವ ಕರ್ನಾಟಕ ಬುಡಕಟ್ಟು ಜನರ ಜಾನಪದ ಸಂಸ್ಕೃತಿಯನ್ನು ಸಂರಕ್ಷಿಸುವುದಕ್ಕೆ ಮತ್ತು ಜಾನಪದ ಕ್ಷೇತ್ರದಲ್ಲಿ ಉನ್ನತ ಶಿಕ್ಷಣ ಮತ್ತು ಸಂಶೋಧನೆಗೆ ಅವಕಾಶವನ್ನು ಕಲ್ಪಿಸುವುದಕ್ಕಾಗಿ ಜಾನಪದ ವಿಶ್ವವಿದ್ಯಾಲಯವನ್ನು ಸ್ಥಾಪಿಸಲಾಗಿದೆ. |
| (ಆ) | ಕೊಡಗು ಜಿಲ್ಲೆಗೆ ಪ್ರತ್ಯೇಕ ವಿಶ್ವವಿದ್ಯಾಲಯ ಸ್ಥಾಪನೆಯ ಉದ್ದೇಶ ಸರ್ಕಾರದ ಮುಂದಿದೆಯೇ; ಇದ್ದಲ್ಲಿ ಇದಕ್ಕೆ ಮೀಸಲಿಟ್ಟ ಅನುದಾನವೆಷ್ಟು; ಯಾವಾಗ ಪ್ರಾರಂಭ ಮಾಡಲಾಗುವುದು? (ಪೂರ್ಣ ವಿವರ ನೀಡುವುದು) | ಉದ್ದೇಶಿಸಿರುವುದಿಲ್ಲ. |

ಸಂಖ್ಯೆ: ಇಡಿ 277 ಯುಎನ್ಇ 2020

(ಡಾ: ಅಶ್ವಥ್ ನಾರಾಯಣ ಸಿ.ಎನ್.)
ಉಪ ಮುಖ್ಯಮಂತ್ರಿಗಳು
(ಉನ್ನತ ಶಿಕ್ಷಣ, ಐಟಿ & ಬಿಟಿ, ವಿಜ್ಞಾನ ಮತ್ತು ತಂತ್ರಜ್ಞಾನ,
ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆ)

# ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 183 |
| ಮಾನ್ಯ ಸದಸ್ಯರ ಹೆಸರು | ಶ್ರೀ ಕುಮಾರ ಬಂಗಾರಪ್ಪ ಎಸ್. (ಸೊರಬ) |
| ಉತ್ತರಿಸಬೇಕಾದ ದಿನಾಂಕ | 24.09.2020 |
| ಉತ್ತರಿಸುವ ಸಚಿವರು | ಮಾನ್ಯ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಸೊರಬ ತಾಲ್ಲೂಕಿನಲ್ಲಿರುವ ವಸತಿ ಶಾಲೆಗಳಿಗೆ ಮೂಲಭೂತ ಸೌಲಭ್ಯಗಳ ಕೊರತೆಯಿರುವುದರಿಂದ ಬಡವರ್ಗದ ವಿದ್ಯಾರ್ಥಿಗಳಿಗೆ ಉತ್ತಮ ಶಿಕ್ಷಣ ಪಡೆಯಲು ಉತ್ತಮ ಗುಣಮಟ್ಟದ ಆಹಾರ ವಸತಿ ಸಿಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | **ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ**<br>ಸೊರಬ ತಾಲ್ಲೂಕಿನಲ್ಲಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ 12 ಮೆಟ್ರಿಕ್-ಪೂರ್ವ ಹಾಗೂ 10 ಮೆಟ್ರಿಕ್-ನಂತರದ ಹೀಗೆ ಒಟ್ಟು 22 ವಿದ್ಯಾರ್ಥಿನಿಲಯಗಳು ಕಾರ್ಯನಿರ್ವಹಿಸುತ್ತಿದ್ದು, ಈ ಪೈಕಿ 14 ವಿದ್ಯಾರ್ಥಿನಿಲಯಗಳು ಸ್ವಂತ ಕಟ್ಟಡಗಳಲ್ಲಿ, 5 ಉಚಿತ ಕಟ್ಟಡಗಳಲ್ಲಿ ಮತ್ತು 3 ವಿದ್ಯಾರ್ಥಿನಿಲಯಗಳು ಬಾಡಿಗೆ ಕಟ್ಟಡಗಳಲ್ಲಿ ಕಾರ್ಯನಿರ್ವಹಿಸುತ್ತಿರುತ್ತವೆ.<br><br>ಬಾಡಿಗೆ ಕಟ್ಟಡಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ವಿದ್ಯಾರ್ಥಿನಿಲಯಗಳಲ್ಲಿ ಸ್ಥಳಾವಕಾಶದ ಕೊರತೆಯಿಂದ ಕೆಲವೊಂದು ಮೂಲಭೂತ ಸೌಲಭ್ಯಗಳ ಕೊರತೆ ಇದ್ದು, ಆಯವ್ಯಯದಲ್ಲಿ ಒದಗಿಸಲಾಗುವ ಅನುದಾನದ ಲಭ್ಯತೆ ಹಾಗೂ ನಿವೇಶನದ ಲಭ್ಯತೆಗನುಗುಣವಾಗಿ ಹಂತ ಹಂತವಾಗಿ ಸ್ವಂತ ಕಟ್ಟಡಗಳನ್ನು ನಿರ್ಮಿಸಿ, ಮಂಜೂರಾತಿ ಸಂಖ್ಯೆಗನುಗುಣವಾಗಿ ಅಗತ್ಯ ಮೂಲಭೂತ ಸೌಲಭ್ಯಗಳನ್ನು ಕಲ್ಪಿಸಲಾಗುತ್ತದೆ.<br><br>ಪ್ರಸ್ತುತ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ಮೆಟ್ರಿಕ್-ಪೂರ್ವ ವಿದ್ಯಾರ್ಥಿನಿಲಯಗಳಲ್ಲಿನ ನಿಲಯಾರ್ಥಿಗಳಿಗೆ ಪ್ರತಿ ತಿಂಗಳಿಗೆ ರೂ.1500/- ರಂತೆ ಹಾಗೂ ಮೆಟ್ರಿಕ್-ನಂತರದ ವಿದ್ಯಾರ್ಥಿನಿಲಯಗಳಲ್ಲಿನ ನಿಲಯಾರ್ಥಿಗಳಿಗೆ ಪ್ರತಿ ತಿಂಗಳಿಗೆ ರೂ.1600/- ರಂತೆ ಭೋಜನಾ ವೆಚ್ಚವನ್ನು ಭರಿಸಲಾಗುತ್ತಿದ್ದು, ಉತ್ತಮ ಗುಣಮಟ್ಟದ ಪೌಷ್ಟಿಕಾಂಶವುಳ್ಳ ಆಹಾರವನ್ನು ನೀಡಲಾಗುತ್ತಿರುತ್ತದೆ.<br><br>ಸೊರಬ ತಾಲ್ಲೂಕಿನಲ್ಲಿ ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ವತಿಯಿಂದ ಈ ಕೆಳಕಂಡ 4 ಪರಿಶಿಷ್ಟ ಜಾತಿಯ ವಸತಿ ಶಾಲೆಗಳು ಕಾರ್ಯನಿರ್ವಹಿಸುತ್ತಿದ್ದು, ಈ ಪೈಕಿ 02 ವಸತಿ ಶಾಲೆಗಳು ಸ್ವಂತ ಹಾಗೂ 02 ವಸತಿ ಶಾಲೆಗಳು ಬಾಡಿಗೆ ಕಟ್ಟಡದಲ್ಲಿ ಕಾರ್ಯನಿರ್ವಹಿಸುತ್ತಿವೆ.<br><br>1) **ಮೊರಾರ್ಜಿ ದೇಸಾಯಿ ವಸತಿ ಶಾಲೆ, ಹಿರೇಮಾಗಡಿ:** ವಸತಿ ಶಾಲೆಯು ಸ್ವಂತ ಕಟ್ಟಡದಲ್ಲಿ ಕಾರ್ಯನಿರ್ವಹಿಸುತ್ತಿದ್ದು, 125 ಮಂಚಗಳು, 25 ಡೈನಿಂಗ್ ಟೇಬಲ್‌ಗಳು, 500 ಲೀ. ಸಾಮರ್ಥ್ಯದ 4 ಸೋಲಾರ್ ವಾಟರ್ ಹೀಟರ್‌ಗಳು, 25 ಕೆವಿಎ ಡೀಸಲ್ ಜನರೇಟರ್ ಸೆಟ್, ಸಿಸಿ ಕ್ಯಾಮರ ಮತ್ತಿತ್ತರ ಮೂಲಭೂತ ಸೌಕರ್ಯಗಳನ್ನು ಒದಗಿಸಲಾಗಿದೆ. |

| | | |
|---|---|---|
| | | 2) ಕಿತ್ತೂರು ರಾಣಿ ಚೆನ್ನಮ್ಮ ವಸತಿ ಶಾಲೆ, ಹಿರೇಮಾಗಡಿ: ವಸತಿ ಶಾಲೆಯು ಸ್ವಂತ ಕಟ್ಟಡದಲ್ಲಿ ಕಾರ್ಯನಿರ್ವಹಿಸುತ್ತಿದ್ದು, 25 ಡೈನಿಂಗ್ ಟೇಬಲ್‌ಗಳು, 500 ಲೀ. ಸಾಮರ್ಥ್ಯದ 4 ಸೋಲಾರ್ ವಾಟರ್ ಹೀಟರ್‌ಗಳು, 25 ಕೆವಿಎ ಡೀಸಲ್ ಜನರೇಟರ್ ಸೆಟ್, ಸಿಸಿ ಕ್ಯಾಮರ ಮತ್ತಿತ್ತರ ಮೂಲಭೂತ ಸೌಕರ್ಯಗಳನ್ನು ಒದಗಿಸಲಾಗಿದೆ. ಪೀಠೋಪಕರಣ ಸಾಮಗ್ರಿಗಳನ್ನು ಒದಗಿಸಲು ಟೆಂಡರ್ ಕರೆಯಲಾಗಿದ್ದು, ಟೆಂಡರ್ ಪ್ರಕ್ರಿಯೆ ಪೂರ್ಣಗೊಂಡ ನಂತರ ಒದಗಿಸಲು ಕ್ರಮವಹಿಸಲಾಗುವುದು.<br>3) **ಶ್ರೀಮತಿ ಇಂದಿರಾ ಗಾಂಧಿ ವಸತಿ ಶಾಲೆ ಚಂದ್ರಗುತ್ತಿ:** ಈ ವಸತಿ ಶಾಲೆಯು 2017-18ನೇ ಸಾಲಿನಿಂದ ಹೊಸದಾಗಿ ಪ್ರಾರಂಭಗೊಂಡು, ಬಾಡಿಗೆ ಕಟ್ಟಡದಲ್ಲಿ ಕಾರ್ಯನಿರ್ವಹಿಸುತ್ತಿದೆ. ಪ್ರಸ್ತುತ ವಸತಿ ಶಾಲಾ ಸಂಕೀರ್ಣ ನಿರ್ಮಾಣವಾಗುತ್ತಿದ್ದು, ಕಟ್ಟಡ ಪೂರ್ಣಗೊಂಡ ನಂತರ ಎಲ್ಲಾ ಅಗತ್ಯ ಮೂಲಭೂತ ಸೌಕರ್ಯಗಳನ್ನು ಕಲ್ಪಿಸಲು ಕ್ರಮವಹಿಸಲಾಗುವುದು.<br>4) ಡಾ.ಬಿ.ಅರ್.ಅಂಬೇಡ್ಕರ್ ವಸತಿ ಶಾಲೆ ಕುಪ್ಪಗದ್ದೆ ಈ ವಸತಿ ಶಾಲೆಯು 2017-18ನೇ ಸಾಲಿನಿಂದ ಹೊಸದಾಗಿ ಪ್ರಾರಂಭವಾಗಿದ್ದು, ಬಾಡಿಗೆ ಕಟ್ಟಡದಲ್ಲಿ ಕಾರ್ಯನಿರ್ವಹಿಸುತ್ತಿದೆ. ಸದರಿ ಶಾಲೆಗೆ ಕಟ್ಟಡ ನಿರ್ಮಾಣ ಮಾಡಲು ನಿವೇಶನ ಲಭ್ಯವಾಗಿದ್ದು, ಅನುದಾನದ ಲಭ್ಯತೆ ಆಧಾರದ ಮೇಲೆ ಶಾಲಾ ಕಟ್ಟಡ ನಿರ್ಮಾಣ ಮಾಡಲಾಗುವುದು.<br><br>ಅಲ್ಲದೇ, ಮೇಲ್ಕಂಡ 4 ವಸತಿ ಶಾಲೆಗಳ ವಿದ್ಯಾರ್ಥಿಗಳಿಗೆ ಅವಶ್ಯಕ ಮೂಲಭೂತ ಸೌಕರ್ಯಗಳಾದ ಸಿದ್ದಪಡಿಸಿದ ಸಮವಸ್ತ್ರ, ನೋಟ್ ಪುಸ್ತಕ ಮತ್ತು ಲೇಖನ ಸಾಮಗ್ರಿಗಳು, ಶುಚಿ ಸಂಭ್ರಮ ಕಿಟ್ ಹಾಗೂ ಶೂ, ಸಾಕ್ಸ್, ಟೈ ಮತ್ತು ಬೆಲ್ಟ್‌ಗಳನ್ನು ಪ್ರತಿ ಶೈಕ್ಷಣಿಕ ವರ್ಷದ ಪ್ರಾರಂಭದಲ್ಲಿಯೇ ಒದಗಿಸಲಾಗುತ್ತಿದೆ.<br><br>ಶಿವಮೊಗ್ಗ ಜಿಲ್ಲೆಯ ವ್ಯಾಪ್ತಿಯಲ್ಲಿನ ವಸತಿ ಶಾಲೆಗಳಿಗೆ ಆಹಾರ ಧಾನ್ಯಗಳನ್ನು ಸರಬರಾಜು ಮಾಡಲು ಜಿಲ್ಲಾಮಟ್ಟದಲ್ಲಿ ಟೆಂಡರ್ ಕರೆದು ಖರೀದಿಸಿ ಪೂರೈಕೆ ಮಾಡಲಾಗಿದ್ದು, ವಿದ್ಯಾರ್ಥಿಗಳಿಗೆ ಉತ್ತಮ ಗುಣಮಟ್ಟದ ಆಹಾರ ಒದಗಿಸಲಾಗುತ್ತಿದ್ದು, ಯಾವುದೇ ದೂರುಗಳು ಸ್ವೀಕರಿಸಿರುವುದಿಲ್ಲ.<br><br>2020-21ನೇ ಸಾಲಿಗೆ ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ವತಿಯಿಂದ ಜಿಲ್ಲಾವಾರು ಟೆಂಡರ್ ಕರೆದು L1 ಗುತ್ತಿಗೆದಾರರನ್ನು ಆಯ್ಕೆ ಮಾಡಲಾಗಿದೆ. ಶಾಲೆಗಳು ಪ್ರಾರಂಭವಾದ ನಂತರ ಉತ್ತಮ ಗುಣಮಟ್ಟದ ಆಹಾರ ಪದಾರ್ಥಗಳನ್ನು ವಸತಿ ಶಾಲೆಗಳಿಗೆ ಪೂರೈಕೆ ಮಾಡಲು ಕ್ರಮ ವಹಿಸಲಾಗುವುದು. |
| ಆ) | ಬಂದಿದಲ್ಲಿ, ಈ ಸಂಬಂಧ ಕೈಗೊಂಡಿರುವ ಕ್ರಮಗಳೇನು; | 2019-20ನೇ ಸಾಲಿನಲ್ಲಿ ಸೊರಬ ತಾಲ್ಲೂಕಿನ ಸ್ವಂತ ಕಟ್ಟಡದಲ್ಲಿ ಕಾರ್ಯನಿರ್ವಹಿಸುತ್ತಿರುವ 12 ವಿದ್ಯಾರ್ಥಿ ನಿಲಯಗಳಿಗೆ ಅಗತ್ಯ ಮೂಲಭೂತ ಸೌಕರ್ಯ ಒದಗಿಸುವ ನಿಟ್ಟಿನಲ್ಲಿ ಸ್ವಂತ ಕಟ್ಟಡಗಳ ದುರಸ್ತಿ ಕಾಮಗಾರಿಗೆ ರೂ.164.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದ್ದು, ದುರಸ್ತಿ ಕಾಮಗಾರಿಗಳು ಪ್ರಗತಿಯಲ್ಲಿರುತ್ತವೆ. |

| | | |
|---|---|---|
| ಇ) | ಆನವಟ್ಟಿಯಲ್ಲಿ ವಸತಿ ನಿಲಯಗಳ ಕೊರತೆಯಿಂದ ಹಾಲಿಯಿರುವ ವಸತಿ ನಿಲಯಗಳ ಮೇಲೆ ಅಧಿಕ ಒತ್ತಡವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಆನವಟ್ಟಿ ಹೋಬಳಿ, ಆನವಟ್ಟಿ ಟೌನ್‌ನಲ್ಲಿ ಈಗಾಗಲೇ 3 ಮೆಟ್ರಿಕ್ ನಂತರದ ಬಾಲಕಿಯರ ವಿದ್ಯಾರ್ಥಿ ನಿಲಯಗಳು ಕಾರ್ಯನಿರ್ವಹಿಸುತ್ತಿದ್ದು ಮಂಜೂರಾತಿ ಸಂಖ್ಯೆಗೆನುಗುಣವಾಗಿ ಪ್ರವೇಶವಾಗದ ಕಾರಣ ಉಳಿಕೆ ಸ್ಥಾನಗಳನ್ನು ಹೆಚ್ಚಿನ ಬೇಡಿಕೆ ಇರುವ ವಿದ್ಯಾರ್ಥಿ ನಿಲಯಗಳಿಗೆ ತಾತ್ಕಾಲಿಕವಾಗಿ ವರ್ಗಾವಣೆ ಮಾಡಲಾಗಿರುತ್ತದೆ. |
| | | ಸೊರಬ ತಾಲ್ಲೂಕಿನ ಆನವಟ್ಟಿಯಲ್ಲಿ ಮೆಟ್ರಿಕ್ ಪೂರ್ವ ಬಾಲಕಿಯರ ವಿದ್ಯಾರ್ಥಿ ನಿಲಯಗಳಿಗೆ ಬೇಡಿಕೆ ಇರುವುದರಿಂದ, ಚಂದ್ರಗುತ್ತಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯದ ಪ್ರವೇಶಕ್ಕೆ ಹೆಚ್ಚಿನ ಬೇಡಿಕೆ ಇಲ್ಲದ ಕಾರಣ ಸದರಿ ವಿದ್ಯಾರ್ಥಿ ನಿಲಯವನ್ನು ಆನವಟ್ಟಿ ಗ್ರಾಮಕ್ಕೆ ಮೆಟ್ರಿಕ್-ಪೂರ್ವ ಬಾಲಕಿಯರ ವಿದ್ಯಾರ್ಥಿನಿಲಯವನ್ನಾಗಿ ಪರಿವರ್ತಿಸಿ ಸ್ಥಳಾಂತರಿಸುವ ಕುರಿತು ಪ್ರಸ್ತಾವನೆ ಸ್ವೀಕೃತವಾಗಿದ್ದು, ಸರ್ಕಾರದ ಪರಿಶೀಲನೆಯಲ್ಲಿದೆ. |
| ಈ) | ಬಂದಿದ್ದಲ್ಲಿ, ಆನವಟ್ಟಿ ಭಾಗದಲ್ಲಿ ಮೆಟ್ರಿಕ್ ಪೂರ್ವ ಹಾಗೂ ಮೆಟ್ರಿಕ್ ನಂತರದ ಬಾಲಕಿಯರ ನೂತನ ವಸತಿ ನಿಲಯ ಮಂಜೂರಾತಿ ಮಾಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; ಹಾಗಿದ್ದಲ್ಲಿ ಪ್ರಸ್ತುತ ಆರ್ಥಿಕ ವರ್ಷದಲ್ಲಿ ಮಂಜೂರಾತಿ ನೀಡಿ ಅನುದಾನ ಬಿಡುಗಡೆ ಮಾಡಲಾಗುವುದೇ? | ರಾಜ್ಯದಲ್ಲಿ ಹೊಸ ವಿದ್ಯಾರ್ಥಿನಿಲಯಗಳ ಮಂಜೂರಾತಿಯು ರಾಜ್ಯದ ಒಟ್ಟಾರೆ ಬೇಡಿಕೆ ಹಾಗೂ ಆಯಾ ಆರ್ಥಿಕ ವರ್ಷದ ಅನುದಾನದ ಲಭ್ಯತೆಯನ್ನು ಆಧರಿಸಿರುತ್ತದೆ. |

ಸಂಖ್ಯೆ:ಹಿಂವಕ 536 ಬಿಎಂಎಸ್ 2020

(ಬಿ.ಶ್ರೀರಾಮುಲು)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

# ಕರ್ನಾಟಕ ವಿಧಾನ ಸಭೆ

ಚುಕ್ಕೆಗುರುತಿನ ಪ್ರಶ್ನೆ ಸಂಖ್ಯೆ : **526**
ಸದಸ್ಯರ ಹೆಸರು : ಶ್ರೀ. ಬಾಲಕೃಷ್ಣ ಸಿ. ಎನ್ (ಶ್ರವಣಬೆಳಗೋಳ)
ಉತ್ತರಿಸಬೇಕಾದ ದಿನಾಂಕ : 24.09.2020
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ರಾಜ್ಯದಲ್ಲಿರುವ ಪ್ರೌಢಶಾಲಾ ದೈಹಿಕ ಶಿಕ್ಷಕರ ಸಂಖ್ಯೆ ಎಷ್ಟು (ಜಿಲ್ಲಾವಾರು ಮಾಹಿತಿ ನೀಡುವುದು) | ಸಂಖ್ಯೆ:4180<br>ಜಿಲ್ಲಾವಾರು ಮಾಹಿತಿ ಲಗತ್ತಿಸಿದೆ. |
| ಆ | ಆ ಶಿಕ್ಷಕರುಗಳಿಗೆ ಶಾಲಾ ಹಂತದಲ್ಲಿ ದೈಹಿಕ ಶಿಕ್ಷಣ ಪಠ್ಯಕ್ರಮ ಅಳವಡಿಕೆ ಅಧ್ಯಯನಕ್ಕಾಗಿ ಸರ್ಕಾರ ನೇಮಿಸಿದ ಪ್ರೊ.ಎಲ್.ಆರ್. ವೈದ್ಯನಾಥನ್ ಸಮಿತಿಯ ಸರ್ಕಾರಕ್ಕೆ ವರದಿಯನ್ನು ಸಲ್ಲಿಸಿದೆಯೇ; ಹಾಗಿದ್ದಲ್ಲಿ, ಯಾವಾಗ ಸಲ್ಲಿಸಲಾಗಿದೆ; | ದಿನಾಂಕ:11/12/2006ರಲ್ಲಿ ಸರ್ಕಾರಕ್ಕೆ ವರದಿ ಸಲ್ಲಿಕೆಯಾಗಿದೆ. |
| ಇ | ಪ್ರೌಢಶಾಲಾ ದೈಹಿಕ ಶಿಕ್ಷಕರನ್ನು ಸಹ ಶಿಕ್ಷಕರೆಂದು ಪರಿಗಣಿಸುವ ಪ್ರಸ್ತಾವನೆ ಸಚಿವ ಸಂಪುಟದ ಮುಂದೆ ಬಾಕಿಯಿರುವ ಕ್ರಮ ಸರ್ಕಾರದ ಗಮನಕ್ಕೆ ಬಂದಿದೆಯೇ; | ಇಲ್ಲ |
| ಈ | ಹಾಗಿದ್ದಲ್ಲಿ, ಸದರಿ ಪ್ರಸ್ತಾವನೆಗೆ ಅನುಮೋದನೆ ನೀಡಲು ಸರ್ಕಾರಕ್ಕಿರುವ ತೊಂದರೆಗಳೇನು; | ದೈಹಿಕ ಶಿಕ್ಷಣ ಶಿಕ್ಷಕರುಗಳ ಪದನಾಮವನ್ನು "ಸಹ ಶಿಕ್ಷಕರು" (ದೈಹಿಕ ಶಿಕ್ಷಣ) ಎಂದು ಪರಿಗಣಿಸಿ ಸಹ ಶಿಕ್ಷಕರುಗಳಿಗೆ ದೊರೆಯುವ ಎಲ್ಲಾ ರೀತಿಯ ಸೌಲಭ್ಯಗಳನ್ನು ದೈಹಿಕ ಶಿಕ್ಷಣ ಶಿಕ್ಷಕರುಗಳಿಗೆ ನೀಡುವ ಪ್ರಸ್ತಾವನೆಯು ಸರ್ಕಾರದ ಪರಿಶೀಲನೆಯಲ್ಲಿದೆ. |
| ಉ | ಹಾಗಿಲ್ಲದಿದ್ದಲ್ಲಿ, ಸದರಿ ಪ್ರಸ್ತಾವನೆಗೆ ಯಾವಾಗ ಒಪ್ಪಿಗೆ ನೀಡಲಾಗುವುದು ಮತ್ತು ಪ್ರೊ; ಎಲ್.ಆರ್ ವೈದ್ಯನಾಥನ್ ವರದಿಯನ್ನು ಯಾವ ಕಾಲಮಿತಿಯೊಳಗೆ ಅನುಷ್ಠಾನಗೊಳಿಸಲಾಗುವುದು (ವಿವರಗಳನ್ನು ನೀಡುವುದು)? | ಸರ್ಕಾರದ ಆದೇಶ ಸಂಖ್ಯೆ :ಇಡಿ 290 ಎಸ್ಎಲ್‌ಬಿ 2006, ದಿ:06/08/2007ರಲ್ಲಿ ಪ್ರೋ:ವೈದ್ಯನಾಥನ್ ವರದಿಗೆ ಅನುಮೋದನೆ ನೀಡಿದ್ದು, ಸದರಿ ವರದಿಯಲ್ಲಿನ 14 ಅಂಶಗಳ ಪೈಕಿ 13 ಅಂಶಗಳನ್ನು ಜಾರಿಗೊಳಿಸಲಾಗಿದ್ದು, ಉಳಿದ 14ನೇ ಅಂಶವಾದ ದೈಹಿಕ ಶಿಕ್ಷಣ ಶಿಕ್ಷಕರುಗಳ ಪದನಾಮವನ್ನು "ಸಹ ಶಿಕ್ಷಕರು" (ದೈಹಿಕ ಶಿಕ್ಷಣ) ಎಂದು ಪರಿಗಣಿಸಲು ಹಾಗೂ ಸಾರ್ವಜನಿಕ ಶಿಕ್ಷಣ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳನ್ನು ಸಮಗ್ರವಾಗಿ ಪರಿಷ್ಕರಣೆ ಮಾಡುವ ಬಗ್ಗೆ ಸರ್ಕಾರದ ಪರಿಶೀಲನೆಯಲ್ಲಿದೆ. |

| | | |
|---|---|---|
| | | ಈ ಬಗ್ಗೆ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣ ಇವರ ಅಧ್ಯಕ್ಷತೆಯಲ್ಲಿ ದಿನಾಂಕ:24/05/2018ರಂದು ನಡೆದ ಸಭೆಯಲ್ಲಿ ಚರ್ಚಿಸಿ ನಿರ್ಣಯಿಸಿದಂತೆ, ದೈಹಿಕ ಶಿಕ್ಷಕರುಗಳ ಪದನಾಮವನ್ನು "ಸಹ ಶಿಕ್ಷಕರು" (ದೈಹಿಕ ಶಿಕ್ಷಣ) ಎಂದು ಪರಿಗಣಿಸುವ ಬಗ್ಗೆ ಕರಡು ತಿದ್ದುಪಡಿ ನಿಯಮಗಳನ್ನು ಅನುಮೋದಿಸಿರುತ್ತಾರೆ.<br><br>ಸಾರ್ವಜನಿಕ ಶಿಕ್ಷಣ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳ ಸಮಗ್ರ ಪರಿಷ್ಕರಣಾ ತಿದ್ದುಪಡಿ ನಿಯಮಗಳ ಕುರಿತಂತೆ ಆರ್ಥಿಕ ಇಲಾಖೆ, ಸಿಆಸು ಇಲಾಖೆ ಹಾಗೂ ಸಂಸದೀಯ ವ್ಯವಹಾರಗಳ ಇಲಾಖೆಗಳೊಂದಿಗೆ ಸಮಾಲೋಚಿಸಲಾಗಿದ್ದು, ಆರ್ಥಿಕ ಇಲಾಖೆಯು ಕೆಲವು ಮಾಹಿತಿ ಒದಗಿಸುವಂತೆ ಕೋರಿದೆ. ಸಿಬ್ಬಂದಿ ಮತ್ತು ಆಡಳಿತ ಸುಧರಣೆ ಇಲಾಖೆ ಮತ್ತು ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆಗಳು ಕೆಲವು ಅಂಶಗಳ ಬಗ್ಗೆ ಸಲಹೆ / ಅಭಿಪ್ರಾಯ ನೀಡಿವೆ.<br><br>ಈ ಕುರಿತಂತೆ ದಿ:17/06/2020ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆ ರವರ ಅಧ್ಯಕ್ಷತೆಯಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತರು ಮತ್ತು ಇತರೆ ಅಧಿಕಾರಿಗಳೊಂದಿಗೆ ಸಭೆ ನಡೆಸಲಾಗಿದೆ. ಸದರಿ ಸಭೆಯಲ್ಲಿ, ಆರ್ಥಿಕ ಇಲಾಖೆಯು ಕೋರಿರುವ ಮಾಹಿತಿಯನ್ನು ಒದಗಿಸಲು ಮತ್ತು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯು ನೀಡಿರುವ ಸಲಹೆಗಳನ್ನು ಅಳವಡಿಸಿಕೊಂಡು ಪರಿಷ್ಕೃತ ಕರಡು ನಿಯಮಗಳನ್ನು ಸಿದ್ಧಪಡಿಸಿ, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆಯ ಪರಿಶೋಧನೆಗೆ ಕಳುಹಿಸಲು ನಿರ್ಣಯಿಸಲಾಗಿದೆ. ಅದರಂತೆ, ಆರ್ಥಿಕ ಇಲಾಖೆಗೆ ಮಾಹಿತಿ ಒದಗಿಸುವ ಬಗ್ಗೆ ಮಾಹಿತಿಗಳನ್ನು ಕ್ರೋಢೀಕರಿಸಲು ಮತ್ತು ಪರಿಷ್ಕೃತ ಕರಡು ನಿಯಮಗಳನ್ನು ಸಿದ್ಧಪಡಿಸಲು ಕ್ರಮವಹಿಸಲಾಗುತ್ತಿದೆ. |

ಸಂಖ್ಯೆ: ಇಪಿ 63 ಎಲ್‌ಬಿಪಿ 2020

(ಎಸ್. ಸುರೇಶ್ ಕುಮಾರ್)
ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಹಾಗೂ
ಸಕಾಲ ಸಚಿವರು

## ಜಿಲ್ಲಾವಾರು ದೈಹಿಕ ಶಿಕ್ಷಣ ಶಿಕ್ಷಕರ ಹುದ್ದೆಗಳ ಮಾಹಿತಿ

| ಕ್ರ ಸಂ | ಜಿಲ್ಲೆಯ ಹೆಸರು | ಕರ್ತವ್ಯ ನಿರ್ವಹಿಸುತ್ತಿರುವ ಶಿಕ್ಷಕರ ಸಂಖ್ಯೆ |
|---|---|---|
| 1 | ಬಳ್ಳಾರಿ | 163 |
| 2 | ಉಡುಪಿ | 101 |
| 3 | ಹಾವೇರಿ | 127 |
| 4 | ತುಮಕೂರು | 122 |
| 5 | ಶಿರಸಿ | 71 |
| 6 | ಶಿವಮೊಗ್ಗ | 162 |
| 7 | ಕೊಪ್ಪಳ | 134 |
| 8 | ದಕ್ಷಿಣ ಕನ್ನಡ | 138 |
| 9 | ಬೀದರ್ | 138 |
| 10 | ಕಾರವಾರ (ಉತ್ತರ ಕನ್ನಡ) | 44 |
| 11 | ಗದಗ | 102 |
| 12 | ಮಧುಗಿರಿ | 85 |
| 13 | ಬೆಂಗಳೂರು ಉತ್ತರ | 53 |
| 14 | ಚಿಕ್ಕಬಳ್ಳಾಪುರ | 107 |
| 15 | ಮೈಸೂರು | 235 |
| 16 | ಮಂಡ್ಯ | 184 |
| 17 | ಬೆಂಗಳೂರು ಗ್ರಾಮಾಂತರ | 64 |
| 18 | ಚಿಕ್ಕೋಡಿ | 153 |
| 19 | ಕೋಲಾರ | 107 |
| 20 | ಯಾದಗಿರಿ | 109 |
| 21 | ಬೆಳಗಾವಿ | 122 |
| 22 | ವಿಜಯಪುರ | 134 |
| 23 | ರಾಯಚೂರು | 165 |
| 24 | ಹಾಸನ | 196 |
| 25 | ಕೊಡಗು | 44 |
| 26 | ಧಾರವಾಡ | 102 |
| 27 | ಚಿತ್ರದುರ್ಗ | 115 |
| 28 | ಬಾಗಲಕೋಟೆ | 154 |
| 29 | ರಾಮನಗರ | 102 |
| 30 | ಕಲ್ಬುರ್ಗಿ | 244 |
| 31 | ಬೆಂಗಳೂರು ದಕ್ಷಿಣ | 71 |
| 32 | ಚಾಮರಾಜನಗರ | 76 |
| 33 | ಚಿಕ್ಕಮಗಳೂರು | 108 |
| 34 | ದಾವಣಗೆರೆ | 148 |
| | ಒಟ್ಟು | **4180** |

ನಿರ್ದೇಶಕರು, (ಪ್ರೌಢ ಶಿಕ್ಷಣ)
ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : **692**

ಸದಸ್ಯರ ಹೆಸರು : ಶ್ರೀ ರಾಜ್ ಕುಮಾರ್ ಪಾಟೀಲ್ (ಸೇಡಂ)

ಉತ್ತರಿಸುವ ದಿನಾಂಕ : 24.09.2020

ಉತ್ತರಿಸುವ ಸಚಿವರು : ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

| ಕ್ರಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಸೇಡಂ ಮತಕ್ಷೇತ್ರದ ವ್ಯಾಪ್ತಿಯಲ್ಲಿರುವ ಸರ್ಕಾರಿ ಪ್ರಾಥಮಿಕ ಹಾಗೂ ಪ್ರೌಢ ಶಾಲೆಗಳೆಷ್ಟು; | ಪ್ರಾಥಮಿಕ ಶಾಲೆಗಳು : 227<br>ಪ್ರೌಢ ಶಾಲೆಗಳು : 31 |
| ಆ) | ಈ ಪ್ರಾಥಮಿಕ ಮತ್ತು ಪ್ರೌಢಶಾಲೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಶಿಕ್ಷಕರ ಸಂಖ್ಯೆ ಎಷ್ಟು; | ಪ್ರಾಥಮಿಕ ಶಾಲೆಗಳು : 735<br>ಪ್ರೌಢ ಶಾಲೆಗಳು : 230 |
| ಇ) | ಸದರಿ ಶಾಲೆಗಳಲ್ಲಿ ಖಾಲಿಯಿರುವ ಶಿಕ್ಷಕರ ಸಂಖ್ಯೆ ಎಷ್ಟು; ಯಾವ ಹುದ್ದೆಗಳು ಖಾಲಿಯಿರುತ್ತವೆ (ಸಂಪೂರ್ಣ ವಿವರ ನೀಡುವುದು); | ಪ್ರಾಥಮಿಕ ಶಾಲೆಗಳು : 263<br>ಪ್ರೌಢ ಶಾಲೆಗಳು : 79<br>ಸಂಪೂರ್ಣ ವಿವರವನ್ನು **ಅನುಬಂಧ-01** ಮತ್ತು **02** ರಲ್ಲಿ ಒದಗಿಸಿದೆ) |
| ಈ) | ಸೇಡಂ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಸಿಬ್ಬಂದಿಗಳೆಷ್ಟು; ಎಷ್ಟು ಹುದ್ದೆಗಳು ಎಷ್ಟು ವರ್ಷಗಳಿಂದ ಖಾಲಿ ಇರುತ್ತವೆ(ವಿವರ ನೀಡುವುದು): | ಸೇಡಂ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಒಟ್ಟು ಸಿಬ್ಬಂದಿಗಳು: 14<br>ಖಾಲಿ ಇರುವ ಹುದ್ದೆಗಳು : 04 |

| ಕ್ರ ಸಂ | ಹುದ್ದೆಗಳು | ಖಾಲಿ ಹುದ್ದೆಗಳ ಸಂಖ್ಯೆ ಮತ್ತು ದಿನಾಂಕ |
|---|---|---|
| 1. | ಶಿಕ್ಷಣ ಸಂಯೋಜಕರು ಪ್ರೌಢ | 01<br>(ದಿನಾಂಕ:14.05.2020ರಿಂದ) |
| 2. | ಶಿಕ್ಷಣ ಸಂಯೋಜಕರು ಪ್ರಾಥಮಿಕ | 02<br>(ದಿನಾಂಕ:01.03.2015 ಮತ್ತು ದಿನಾಂಕ:23.03.2015ರಿಂದ) |
| 3. | ಸಿ.ಸಿ.ಟಿ | 01<br>(ದಿನಾಂಕ:16.07.2016ರಿಂದ) |

| ಕ್ರಸಂ. | ಪ್ರಶ್ನೆ | ಉತ್ತರ |
|---|---|---|
| ಉ) | ಖಾಲಿ ಇರುವ ಹುದ್ದೆಗಳನ್ನು ಭರ್ತಿ ಮಾಡಲು ಸರ್ಕಾರದಿಂದ ಯಾವ ಕ್ರಮ ಕೈಗೊಳ್ಳಲಾಗಿದೆ? | ಸರ್ಕಾರದ ಸುತ್ತೋಲೆ ಸಂಖ್ಯೆ:ಆಇ 03 ಬಿಇಎಂ 2020, ದಿನಾಂಕ:06.07.2020ರಲ್ಲಿ ರಾಜ್ಯದಲ್ಲಿ ಕೋವಿಡ್-19ನಿಂದ ಉಂಟಾದ ಪರಿಸ್ಥಿತಿಯನ್ನು ನಿಭಾಯಿಸಿ ಆರ್ಥಿಕ ಸ್ಥಿತಿಯನ್ನು ಸುಸ್ಥಿತಿಗೆ ತರುವ ನಿಟ್ಟಿನಲ್ಲಿ ಸಂಪನ್ಮೂಲವನ್ನು ಕ್ರೋಢೀಕರಿಸುವುದು ಅಗತ್ಯವಾಗಿರುತ್ತದೆ. ಆರ್ಥಿಕ ಸಂಕಷ್ಟದ ಹಿನ್ನೆಲೆಯಲ್ಲಿ ಹಾಲಿ ನೇಮಕಾತಿಗಳಿಗೆ ವಿಧಿಸಿರುವ ನಿರ್ಬಂಧ ತೆರವಾದ ಕೂಡಲೇ ಶಿಕ್ಷಕರ ನೇಮಕಾತಿ ಪ್ರಕ್ರಿಯೆ ಪ್ರಾರಂಭಿಸಲಾಗುವುದು. |

**ಸಂಖ್ಯೆ: ಇಡಿ 35 ಎಸ್‌ಟಿಬಿ 2020**

(ಎಸ್.ಸುರೇಶ್ ಕುಮಾರ್)

ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

# ಅನುಬಂಧ-1

## ಸರಕಾರಿ ಪ್ರಾಥಮಿಕ ಶಿಕ್ಷಕರ ಖಾಲಿ ಹುದ್ದೆಗಳ ವಿವರ

| ಕ್ರಮ ಸಂಖ್ಯೆ | ಹುದ್ದೆಗಳ ವಿವರ | ಖಾಲಿ ಹುದ್ದೆಗಳ ಸಂಖ್ಯೆ |
|---|---|---|
| 1 | ಮುಖ್ಯ ಗುರುಗಳು | 55 |
| 2 | ಕನ್ನಡ(ಸಮಾಜ ವಿಜ್ಞಾನ)-ಜಿ.ಪಿ.ಟಿ | 29 |
| 3 | ವಿಜ್ಞಾನ- ಜಿ.ಪಿ.ಟಿ | 15 |
| 4 | ಹಿಂದಿ- ಜಿ.ಪಿ.ಟಿ | 01 |
| 5 | ಉರ್ದು ವಿಜ್ಞಾನ- ಜಿ.ಪಿ.ಟಿ | 01 |
| 6 | ಕನ್ನಡ : ಪಿ.ಎಸ್.ಟಿ | 15 |
| 7 | ಇಂಗ್ಲೀಷ್-ಪಿ.ಎಸ್.ಟಿ | 22 |
| 8 | ವಿಜ್ಞಾನ: ಪಿ.ಎಸ್.ಟಿ | 98 |
| 9 | ಹಿಂದಿ-ಪಿ.ಎಸ್.ಟಿ | 01 |
| 10 | ಉರ್ದು ಸಾಮಾನ್ಯ ಪಿ.ಎಸ್.ಟಿ. | 02 |
| 11 | ಉರ್ದು ವಿಜ್ಞಾನ-ಪಿ.ಎಸ್.ಟಿ | 01 |
| 12 | ದೈಹಿಕ ಶಿಕ್ಷಕರು ಗ್ರೇಡ್-2 | 19 |
| 13 | ಇಂಗ್ಲೀಷ್-ಜಿ.ಪಿ.ಟಿ | 04 |
| | ಒಟ್ಟು | 263 |

ಕ್ಷೇತ್ರ ಶಿಕ್ಷಣಾಧಿಕಾರಿಗಳು
ಸೇಡಂ ಜಿ॥ ಕಲಬುರಗಿ

ಅನುಬಂಧ - 2

ಸರಕಾರಿ ಪ್ರೌಢ ಶಿಕ್ಷಕರ ಖಾಲಿ ಹುದ್ದೆಗಳ ವಿವರ

| ಕ್ರಮ ಸಂಖ್ಯೆ | ಹುದ್ದೆಗಳ ವಿವರ | ಖಾಲಿ ಹುದ್ದೆಗಳ ಸಂಖ್ಯೆ |
|---|---|---|
| 1 | ಮುಖ್ಯ ಗುರುಗಳು | 09 |
| 2 | ಕನ್ನಡ ಭಾಷಾ ಶಿಕ್ಷಕರು | 12 |
| 3 | ಆಂಗ್ಲ ಭಾಷಾ ಶಿಕ್ಷಕರು | 12 |
| 4 | ಹಿಂದಿ ಭಾಷಾ ಶಿಕ್ಷಕರು | 06 |
| 5 | ಉರ್ದು ಭಾಷಾ ಶಿಕ್ಷಕರು | 02 |
| 6 | ಭೌತ ವಿಜ್ಞಾನ(ಗಣಿತ) ಶಿಕ್ಷಕರು | 08 |
| 7 | ಜೀವ ವಿಜ್ಞಾನ ಶಿಕ್ಷಕರು | 04 |
| 8 | ಕಲಾ ಕನ್ನಡ | 07 |
| 8 | ದೈಹಿಕ ಶಿಕ್ಷಣ ಶಿಕ್ಷಕರು | 03 |
| 9 | ಚಿತ್ರಕಲಾ ಶಿಕ್ಷಕರು | 08 |
| 10 | ವೃತ್ತಿ ಶಿಕ್ಷಕರು | 08 |
| | ಒಟ್ಟು ಖಾಲಿ ಹುದ್ದೆಗಳು | 79 |

ಕ್ಷೇತ್ರ ಶಿಕ್ಷಣಾಧಿಕಾರಿಗಳು
ಸೇಡಂ ಜಿ॥ ಕಲಬುರಗಿ

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 921
ಸದಸ್ಯರ ಹೆಸರು : ಶ್ರೀಮತಿ ಸೌಮ್ಯ ರೆಡ್ಡಿ(ಜಯನಗರ)
ಉತ್ತರಿಸಬೇಕಾದ ದಿನಾಂಕ : 24-09-2020
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಲಾಕ್‌ಡೌನ್‌ನಿಂದಾಗಿ ಹಲವಾರು ವಿದ್ಯಾರ್ಥಿಗಳು ಲ್ಯಾಪ್‌ಟಾಪ್, ಸ್ಮಾರ್ಟ್ ಫೋನ್‌ಗಳನ್ನು ಖರೀದಿಸಲು ಸಾಧ್ಯವಾಗದೆ ಆನ್ಲೈನ್ ತರಗತಿಗಳಿಂದ ವಂಚಿತರಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. ಸರ್ಕಾರ ಗಮನಿಸಿದೆ.<br>1. ಬಹಳಷ್ಟು ಸರ್ಕಾರಿ ಶಾಲಾ ವಿದ್ಯಾರ್ಥಿಗಳಲ್ಲಿ 4ಜಿ ಮೊಬೈಲ್‌ಗಳು, ಟ್ಯಾಬ್, ಲಾಪ್‌ಟಾಪ್ ಮತ್ತು ಗಣಕಯಂತ್ರಗಳ ಲಭ್ಯತೆಗಳಿಲ್ಲ.<br>2. ರಾಜ್ಯವು ಭೌಗೋಳಿಕವಾಗಿ ವೈವಿಧ್ಯಮಯತೆಯಿಂದ ಕೂಡಿದೆ. ಈ ಎಲ್ಲಾ ರೀತಿಯ ಪ್ರದೇಶಗಳಲ್ಲಿ ಒಂದೇ ತೆರನಾಗಿ ನೆಟ್‌ವರ್ಕ್ ಇರುವುದಿಲ್ಲ. |
| ಆ) | ಹಾಗಿದ್ದಲ್ಲಿ, ಈ ಸಮಸ್ಯೆಯನ್ನು ಬಗೆಹರಿಸಲು ಸರ್ಕಾರ ಯಾವ ಕ್ರಮಗಳನ್ನು ಕೈಗೊಂಡಿದೆ? | ಆನ್‌ಲೈನ್ ಶಿಕ್ಷಣಕ್ಕೆ ಸರ್ಕಾರಿ ಶಾಲಾ-ಕಾಲೇಜುಗಳಲ್ಲಿ ಪ್ರಾಥಮಿಕ ಆದ್ಯತೆ ನೀಡಿಲ್ಲ. ಆದರೂ ತಾಂತ್ರಿಕ ಸೌಲಭ್ಯಗಳ ಲಭ್ಯತೆಯ ಆಧಾರದಲ್ಲಿ ಆನ್‌ಲೈನ್ ಶಿಕ್ಷಣವನ್ನು ಸಕಾರಗೊಳಿಸಲು ಇಲಾಖೆಯು ಈ ಮುಂದಿನ ಕ್ರಮಗಳನ್ನು ಅನುಸರಿಸಿದೆ.<br>• ಆನ್‌ಲೈನ್ ಶಿಕ್ಷಣಕ್ಕೆ ಅಗತ್ಯವಾದ ತಾಂತ್ರಿಕ ಪರಿಕರಗಳನ್ನು ಹೊಂದಿರುವ ವಿದ್ಯಾರ್ಥಿಗಳ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಆ ಮೂಲಕ ತಾಂತ್ರಿಕ ಪರಿಕರಗಳನ್ನು ಹೊಂದಿರುವ ವಿದ್ಯಾರ್ಥಿಗಳೊಂದಿಗೆ ಸಮೀಪದ ವಿದ್ಯಾರ್ಥಿಗಳು ಜೊತೆಗೂಡಿಸಿ ಕಲಿಕೆಗೆ ಪ್ರೋತ್ಸಾಹಿಸಲಾಗಿದೆ.<br>• ಸಾಧ್ಯವಾದಲ್ಲಿ ತಾಂತ್ರಿಕ ಪರಿಕರಗಳನ್ನು ಅವರ ಮಕ್ಕಳಿಗೆ ಒದಗಿಸಲು ಪೋಷಕರಿಗೆ ಶೈಕ್ಷಣಿಕ ದೃಷ್ಟಿಯಿಂದ ವಿನಂತಿಸಿದೆ.<br>• ಗ್ರಾಮಪಂಚಾಯಿತಿಗಳನ್ನು ಅದರ ವ್ಯಾಪ್ತಿಯ ಶಾಲೆಗೆ ಒಂದು ದೊಡ್ಡ ಪರದೆ ಎಲ್.ಸಿ.ಡಿ ಪ್ರೊಜೆಕ್ಟರ್, ಗಣಕಯಂತ್ರ ಮತ್ತು ಅಂತರಜಾಲ ಸೌಲಭ್ಯ ಒದಗಿಸಲು ಕೋರಲಾಗಿದೆ.<br>• ಈ ಸಂಬಂಧ ಸಮಾಜ ಸೇವಕರು, ಸರ್ಕಾರೇತರ ಸಂಘ ಸಂಸ್ಥೆ(ಎನ್.ಜಿ.ಓ) ಗಳಿಂದ ತಾಂತ್ರಿಕ ಮತ್ತು ಬೌದ್ಧಿಕ ಸಹಾಯಗಳನ್ನು ಒದಗಿಸಲು ಸರ್ಕಾರ ವಿನಂತಿಸಿದೆ.<br>ಆನ್‌ಲೈನ್ ಶಿಕ್ಷಣದಲ್ಲಿನ ಎಲ್ಲಾ ಮಿತಿಗಳನ್ನು ಅರಿತ ಇಲಾಖೆಯು ಇದಕ್ಕೆ ಪರಿಹಾರವಾಗಿ/ಪರ್ಯಾಯವಾಗಿ **'ವಿದ್ಯಾಗಮ ಹಾಗೂ ಸಂವೇದ'** ಎಂಬ ಎರಡು ಶೈಕ್ಷಣಿಕ ಕಾರ್ಯಕ್ರಮಗಳನ್ನು ರೂಪಿಸಿ ಅನುಷ್ಠಾನಗೊಳಿಸಿದೆ. |

| | | |
|---|---|---|
| | | **ವಿದ್ಯಾಗಮ**:- ಈ ಕಾರ್ಯಕ್ರಮದ ಅಡಿಯಲ್ಲಿ ಶಾಲಾ ಶಿಕ್ಷಕರು ವಿದ್ಯಾರ್ಥಿಗಳ ಮನೆಯಂಗಳಕ್ಕೆ ಭೇಟಿನೀಡಿ ಆ ವಾಸಸ್ಥಳದಲ್ಲಿನ ವಿದ್ಯಾರ್ಥಿಗಳ ಚಿಕ್ಕ ಗುಂಪನ್ನು ಸ್ಥಳೀಯವಾಗಿ ಲಭ್ಯವಿರುವ ವಠಾರ, ದೇವಸ್ಥಾನ, ಅಶ್ವತ್ಥಕಟ್ಟೆ ಮುಂತಾದ ಜಾಗಗಳಲ್ಲಿ ಕೂರಿಸಿ ಕಲಿಕಾ ಅನುಭವಗಳನ್ನು ಒದಗಿಸಲಾಗುತ್ತಿದೆ.<br>ಇಲ್ಲಿ ಕಿರುಬೋಧನೆ, ಅಭ್ಯಾಸ, ಚಟುವಟಿಕೆ, ಪ್ರಶ್ನೋತ್ತರ ಚರ್ಚೆ, ಅನುಮಾನಗಳಿಗೆ ಪರಿಹಾರ, ಗೃಹಕಾರ್ಯ ನಿಯೋಜನೆ, ಮತ್ತು ಸಂವಾದದಂತಹ ಕ್ರಿಯಾಶೀಲ ಕ್ರಮಗಳಲ್ಲಿ ಕಲಿಸುವ ಕಾರ್ಯ ಜಾರಿಯಾಗಿದೆ.<br>**ಸಂವೇದ**:- ಇದು ದೂರದರ್ಶನ ಚಂದನ ವಾಹಿನಿಯಲ್ಲಿ ಬಿತ್ತರಗೊಳ್ಳುತ್ತಿರುವ ಬೋಧನಾ-ಕಲಿಕಾ ತರಗತಿ ಯೋಜನೆಯಾಗಿದೆ. ಸರ್ಕಾರವು ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ(DSERT), ಬೆಂಗಳೂರು ಹಾಗೂ ದೂರದರ್ಶನ ಚಂದನ ವಾಹಿನಿಯ ಸಹಯೋಗದಲ್ಲಿ ಈ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲಾಗಿದೆ. ಇಲ್ಲಿ ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆಯು ಶಾಲಾ ಪಠ್ಯವಸ್ತುವಿಗೆ ಅನುಗುಣವಾಗಿ ಆಯ್ದ ಪರಿಣಿತ ಹಾಗೂ ಆಸಕ್ತಿದಾಯಕ ಶಿಕ್ಷಕರ ತಂಡಗಳನ್ನು ವಿಷಯವಾರು ರಚಿಸಿದೆ. ಅವರುಗಳ ಮೂಲ ವಿವಿಧ ತರಗತಿಗಳ ಪಠ್ಯವಸ್ತುವಿನ ಆಧಾರದಲ್ಲಿ ದೂರದರ್ಶನ ತರಗತಿಗಳನ್ನು ಚಿತ್ರೀಕರಿಸಿ ದೂರದರ್ಶನ ಚಂದನ ವಾಹಿನಿಯಲ್ಲಿ ಪಾಠಗಳನ್ನು ಬಿತ್ತರಿಸಲಾಗುತ್ತಿದೆ.<br>• 6ರಿಂದ 10ನೇ ತರಗತಿಗಳ ಪಠ್ಯ ವಿಷಯಕ್ಕೆ ಸಂಬಂಧಿಸಿದ ಇ-ಪಾಠಗಳನ್ನು **'ಮಕ್ಕಳವಾಣಿ Youtube'** ಚಾನಲ್‌ನಲ್ಲಿ ಲಭ್ಯವಾಗುವಂತೆ ಕ್ರಮವಹಿಸಿದೆ.<br>• ಸಂವೇದ ಯೋಜನೆಯಡಿ ಬಿತ್ತರವಾದ ಎಲ್ಲಾ ಇ-ಪಾಠಗಳನ್ನು **DSERT**ಯ **Youtube** ಚಾನಲ್‌ನಲ್ಲಿ ಸಹ ಲಭ್ಯವಾಗುವಂತೆ ಕ್ರಮವಹಿಸಿದೆ.<br>• 8ರಿಂದ 10ನೇ ತರಗತಿಯ ಸಮಾಜ ವಿಜ್ಞಾನ ಆಂಗ್ಲ ಮಾಧ್ಯಮ ಪಾಠಗಳನ್ನು **DSERT**ಯ **Youtube** ಚಾನಲ್‌ನಲ್ಲಿ ಸಹ ಲಭ್ಯವಾಗುವಂತೆ ಕ್ರಮವಹಿಸಿದೆ.<br>• **NCERT** ಯಿಂದ ರೂಪಿತವಾದ 8ರಿಂದ 10ನೇ ತರಗತಿಗಳ ವಿಜ್ಞಾನ ಮತ್ತು ಗಣಿತ ವಿಷಯಗಳ ಆಂಗ್ಲ ಮಾಧ್ಯಮ ಇ-ಪಾಠಗಳು **DIKSHA** ವೆಬ್‌ಸೈಟ್ ಮತ್ತು ಪೋರ್ಟ್‌ಗಳಲ್ಲಿ ಲಭ್ಯವಿದ್ದು, ಈ ಬಗ್ಗೆ ರಾಜ್ಯ ಶಿಕ್ಷಣ |

| | | |
|---|---|---|
| | | ಸಂಶೋಧನೆ ಮತ್ತು ತರಬೇತಿ (DSERT) ಇಲಾಖೆಯು ವ್ಯಾಪಕ ಪ್ರಚಾರ ನೀಡಿದೆ.<br>• ಇಂದಿನವರೆಗೂ ಸುಮಾರು ಎಂಟು ಸಾವಿರ(**8000**) ಇ-ಸಂಪನ್ಮೂಲಗಳು **ಮಕ್ಕಳವಾಣಿ Youtube** ಚಾನಲ್ ಮತ್ತು **DSERT Youtube** ಚಾನಲ್‌ನಲ್ಲಿ ಲಭ್ಯವಿರುತ್ತವೆ. |

ಸಂಖ್ಯೆ: ಇಪಿ 125 ಎಂ.ಹೆಚ್.ಟಿ 2020

S. Su

**ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು**



# ಕರ್ನಾಟಕ ವಿಧಾನ ಸಭೆ

| | | |
|---|---|---|
| 1) | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 923 |
| 2) | ಮಾನ್ಯ ಸದಸ್ಯರ ಹೆಸರು | ಶ್ರೀ ಸೌಮ್ಯ ರೆಡ್ಡಿ (ಜಯನಗರ) |
| 3) | ಉತ್ತರಿಸಬೇಕಾದ ದಿನಾಂಕ | 24/09/2020 |
| 4) | ಉತ್ತರಿಸುವವರು | ಮಾನ್ಯ ಉಪ ಮುಖ್ಯಮಂತ್ರಿಗಳು ಮತ್ತು ಉನ್ನತ ಶಿಕ್ಷಣ, ಐಟಿ/ಬಿಟಿ ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು. |

| ಪ್ರಶ್ನೆ | ಉತ್ತರ |
|---|---|
| ಅ) ಸರ್ಕಾರ ಹೊಸ ಉದ್ಯಮಗಳ ತರಬೇತಿಗಾಗಿ ಕ್ರಮ ಕೈಗೊಂಡಿದೆಯೇ; | ಹೌದು.<br>• ಕೌಶಲ್ಯ ಮಿಷನ್‌ನಿಂದ ಮುಖ್ಯಮಂತ್ರಿಗಳ ಕೌಶಲ್ಯ ಕರ್ನಾಟಕ ಯೋಜನೆಯಡಿ ಹೊಸ ಉದ್ಯಮಗಳಲ್ಲಿ ಬೇಡಿಕೆ ಇರುವ ಫ್ಯೂಚರ್ ಸ್ಕಿಲ್ ತರಬೇತಿ ಕಾರ್ಯಕ್ರಮವನ್ನು ಜಾರಿಗೊಳಿಸಲು content and curriculum ಅಭಿವೃದ್ಧಿ ಪಡಿಸಲು ಕ್ರಮವಹಿಸಲಾಗಿದೆ. ಕೈಗಾರಿಕೆಗಳಲ್ಲಿ ಬೇಡಿಕೆ ಇರುವ ಕೌಶಲ್ಯಗಳನುಸಾರ ತರಬೇತಿ ನೀಡಿ ಉದ್ಯೋಗ ನಿಯುಕ್ತಿಗೊಳಿಸಲು ಕೈಗಾರಿಕೆಗಳೊಂದಿಗೆ ಒಡಂಬಡಿಕೆ ಮಾಡಿಕೊಳ್ಳಲಾಗಿದೆ. |
| ಆ) ಕೈಗೊಂಡಿದ್ದಲ್ಲಿ, ಆಧುನಿಕ ತಂತ್ರಜ್ಞಾನ ಮತ್ತು ಮಾರುಕಟ್ಟೆಯ ಯಾವ ಕೌಶಲ್ಯದ ಮೇಲೆ ಜಾಗೃತಿಯನ್ನು ಮೂಡಿಸುತ್ತಿದೆ; | ಇತ್ತೀಚಿನ ಆಧುನಿಕ ತಂತ್ರಜ್ಞಾನ ಮತ್ತು ಮಾರುಕಟ್ಟೆಯ ಅವಶ್ಯಕತೆ ಅನುಸಾರವಾಗಿ ಜಾಗೃತಿಯನ್ನು ಮೂಡಿಸುವ ಕೌಶಲ್ಯಗಳ ವಿವರಗಳನ್ನು ಅನುಬಂಧದಲ್ಲಿ ನೀಡಲಾಗಿದೆ. |
| ಇ) ರಾಜ್ಯ ಸರ್ಕಾರ ಈ ನಿಟ್ಟಿನಲ್ಲಿ ಕಾರ್ಯ ನಿರ್ವಹಿಸಿದೆಯೇ; ಹಾಗಿದ್ದಲ್ಲಿ, ಈವರೆಗೂ ನಡೆದ ಒಟ್ಟು ತರಬೇತಿ ಶಿಬಿರಗಳೆಷ್ಟು? | ಕೌಶಲ್ಯ ಮಿಷನ್‌ನಿಂದ ಫ್ಯೂಚರ್ ಸ್ಕಿಲ್ ತರಬೇತಿ ಕಾರ್ಯಕ್ರಮವನ್ನು ಜಾರಿಗೊಳಿಸಲು content and curriculum ಅಭಿವೃದ್ಧಿ ಪಡಿಸಿದ ನಂತರ ತರಬೇತಿ ಶಿಬಿರಗಳನ್ನು ಏರ್ಪಡಿಸಲು ಹಾಗೂ ಜಿಟಿಟಿಸಿಯಿಂದ ಸಿ.ಎಂ.ಕೆ.ಕೆ.ವೈ. ಯೋಜನೆಯಡಿ 8 ಕೋರ್ಸ್‌ಗಳಲ್ಲಿ ತರಬೇತಿ ಶಿಬಿರಗಳನ್ನು ಕೈಗೊಳ್ಳಲು ಕ್ರಮವಹಿಸಲಾಗುವುದು. |

**ಸಂಖ್ಯೆ: ಕೌಉಜೀಇ 42 ಉಜೀಪ್ರ 2020**

(ಡಾ॥ ಸಿ.ಎನ್. ಅಶ್ವಥ್ ನಾರಾಯಣ)
ಉಪ ಮುಖ್ಯಮಂತ್ರಿಗಳು ಮತ್ತು ಉನ್ನತ ಶಿಕ್ಷಣ,
ಐಟಿ/ಬಿಟಿ ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ
ಮತ್ತು ಜೀವನೋಪಾಯ ಸಚಿವರು.

ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀಮತಿ ಸೌಮ್ಯ ರೆಡ್ಡಿ (ಜಯನಗರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 923 ರ ಅನುಬಂಧ

**Details of Courses for creating content**

**Skill Mission**

| Sl no | Name of the Course | |
|---|---|---|
| 1 | Penetration Tester | |
| 2 | AI - Data Quality Analyst | |
| 3 | AI - Business Intelligence Analyst | |
| 4 | AI - Visualization Specialist | |
| 5 | Embedded IoT | |
| 6 | Embedded software engineer | |
| 7 | VLSI Design for test | |
| 8 | VLSI physical design engineer | |
| 9 | Low power VLSI ASIC design | |
| 10 | Full Custom Analog Design | |
| 11 | AI - Machine Learning Engineer | |
| 12 | RTL Design Engineer | |
| 13 | Battery Management Systems | |
| 14 | Block chain technology | |
| 15 | IoT - Solution Architect | **Content and Curriculum being developed** |
| 16 | IoT - Software Analyst | |
| 17 | IoT - Test Analyst | |
| 18 | IoT - Security Specialist | |
| 19 | IoT - Network Specialist | |
| 20 | Cloud Consultant | |
| 21 | Cloud Architect | |
| 22 | Cloud Application Developer | |
| 23 | Cloud Migration Analyst | |
| 24 | Cloud Risk & Compliance Officer | |
| 25 | Cloud Security Analyst | |
| 26 | Electric Vehicle Design | |
| 27 | SoC VLSI Verification Engineer | |
| 28 | Project Management for Automotive Engineers | |
| 29 | EV Motor Design and Development | |
| 30 | Software Development for Automotive Electronics | |
| **Govt. Tool Room and Training Center - New Short term courses for 2020-21** | | |
| 1 | Industrial Automation - Technician | |
| 2 | Industrial Automation - Design | |
| 3 | Electrical Installation | |
| 4 | Mechatronics | |
| 5 | IoT and its applications | **Content and Curriculum being developed** |
| 6 | Building Automation- Design & Programming | |
| 7 | Building Automation-Installation & Service | |
| 8 | Master Trainer Training Facility | |

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 934

ಸದಸ್ಯರ ಹೆಸರು : ಶ್ರೀ ಅಮರೇಗೌಡ ಲಿಂಗನಗೌಡ ಪಾಟೀಲ್ ಬಯ್ಯಾಪುರ್ (ಕುಷ್ಟಗಿ)

ಉತ್ತರಿಸುವ ದಿನಾಂಕ : 24.09.2020

ಉತ್ತರಿಸುವ ಸಚಿವರು : ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು.

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಹೈದ್ರಾಬಾದ್-ಕರ್ನಾಟಕ ಪ್ರದೇಶ ವ್ಯಾಪ್ತಿಯಲ್ಲಿ ಬರುವ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ಉಪ ನಿರ್ದೇಶಕರ ಕಛೇರಿ ಹಾಗೂ ಅಪರ ಆಯುಕ್ತರ ಕಛೇರಿಯಲ್ಲಿ ದೀರ್ಘ ಕಾಲದಿಂದ ಒಂದೇ ಕಛೇರಿಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ನೌಕರರಿಂದ ಸರ್ಕಾರ ಹಾಗೂ ಸಾರ್ವಜನಿಕ ಮಹತ್ವದ ಕೆಲಸಗಳು ವಿಳಂಬವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ |
| ಆ) | ಸದರಿ ಕಛೇರಿಗಳಲ್ಲಿ 5 ವರ್ಷಗಳಿಗಿಂತ ಹೆಚ್ಚಾಗಿ ಒಂದೇ ಸ್ಥಳದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸಿಬ್ಬಂದಿಗಳಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ |
| ಇ) | ಹಾದಾಗಿದ್ದಲ್ಲಿ, ಅಂತಹವರ ವಿವರ ನೀಡುವುದು; | ಅಪರ ಆಯುಕ್ತರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಕಲಬುರ್ಗಿ ವಿಭಾಗದ ವ್ಯಾಪ್ತಿಯಲ್ಲಿ 05 ವರ್ಷಗಳಿಗಿಂತ ಹೆಚ್ಚಾಗಿ ಒಂದೇ ಸ್ಥಳದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸಿಬ್ಬಂದಿಗಳ ವಿವರವನ್ನು **ಅನುಬಂಧ-01**ರಲ್ಲಿ ಒದಗಿಸಿದೆ. |
| ಈ) | ಸದರಿ ಸಿಬ್ಬಂದಿಗಳ ತಾತ್ಸಾರ ಮನೋಭಾವನೆಯಿಂದ ಆಡಳಿತದಲ್ಲಿ ದುಷ್ಪರಿಣಾಮ ಉಂಟಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಈ ಕುರಿತು ಯಾವ ಕ್ರಮಗಳನ್ನು ತೆಗೆದುಕೊಳ್ಳಲಾಗಿದೆ; | ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 05 ಸೇನೌವ 2020, ದಿನಾಂಕ:26.06.2020ರ ಆದೇಶದಲ್ಲಿ 2020-21ನೇ ಸಾಲಿಗೆ ಗ್ರೂಪ್-ಬಿ ಮತ್ತು ಗ್ರೂಪ್-ಸಿ ವರ್ಗದ ಅಧಿಕಾರಿ / ನೌಕರರಿಗೆ ಮಾತ್ರ ಅನ್ವಯವಾಗುವಂತೆ ಮಿತಿಗೊಳಿಸಿ ಒಂದು ಜೇಷ್ಠತಾ ಘಟಕದಲ್ಲಿ ಕಾರ್ಯನಿರತ ವೃಂದ ಬಲದ ಶೇ.6%ರಷ್ಟನ್ನು ಮೀರದಂತೆ ದಿನಾಂಕ: 10.07.2020ರವರೆಗೆ ಸಾರ್ವತ್ರಿಕ ವರ್ಗಾವಣೆ ಕೈಗೊಳ್ಳಲು ಅನುಮತಿ ನೀಡಲಾಗಿರುತ್ತದೆ. ಪ್ರಸ್ತುತ ಸರ್ಕಾರಿ ನೌಕರರ ವರ್ಗಾವಣೆ ಪ್ರಕ್ರಿಯೆಯು |
| ಉ) | ಸದರಿ ಸಿಬ್ಬಂದಿಗಳನ್ನು ಬೇರೆ ಸ್ಥಳಗಳಿಗೆ ವರ್ಗಾವಣೆ ಮಾಡುವ ಕುರಿತು ಸರ್ಕಾರ ಯಾವ ಕ್ರಮಗಳನ್ನು ಕೈಗೊಳ್ಳಲಿದೆ? | |

| | | |
|---|---|---|
| | | ಮುಕ್ತಾಯಗೊಂಡಿರುತ್ತದೆ.<br>ಒಂದೇ ಜಾಗದಲ್ಲಿ 05 ವರ್ಷಕ್ಕಿಂತ ಹೆಚ್ಚಿನ ಅವಧಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿಗಳನ್ನು ಮುಂದಿನ ಸಾರ್ವತ್ರಿಕ ವರ್ಗಾವಣೆ ಸಮಯದಲ್ಲಿ ನಿಯಮಾನುಸಾರ ಪರಿಶೀಲಿಸಿ ವರ್ಗಾಯಿಸಲು ಕ್ರಮವಹಿಸಲಾಗುವುದು. |

**ಸಂಖ್ಯೆ: ಇಡಿ 36 ಎಸ್‌ಟಿಬಿ 2020**

(ಎಸ್.ಸುರೇಶ್‌ಕುಮಾರ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ
ಸಕಾಲ ಸಚಿವರು

# ಅನುಬಂಧ-1

| ಕ್ರಮ ಸಂಖ್ಯೆ | ಹುದ್ದೆಗಳ ಪದನಾಮ | 5 ವರ್ಷ ಮೇಲ್ಪಟ್ಟು | 10 ವರ್ಷ ಮೇಲ್ಪಟ್ಟು | 15 ವರ್ಷ ಮೇಲ್ಪಟ್ಟು | 20 ವರ್ಷ ಮೇಲ್ಪಟ್ಟು | ಒಟ್ಟು |
|---|---|---|---|---|---|---|
| 1 | ರಾಜ್ಯ ಪತ್ರಾಂಕಿತ ಸಹಾಯಕರು | 1 | 0 | 0 | 0 | 1 |
| 2 | ಸಹಾಯಕ ನಿರ್ದೇಶಕರು (ವಾಣಿಜ್ಯ) | 0 | 0 | 0 | 0 | 0 |
| 3 | ಸಹಾಯಕ ನಿರ್ದೇಶಕರು/ ಪತ್ರಾಂಕಿತ ವ್ಯವಸ್ಥಾಪಕರು | 8 | 0 | 1 | 0 | 9 |
| 4 | ಲೆಕ್ಕ ಅಧೀಕ್ಷಕರು | 4 | 0 | 0 | 0 | 4 |
| 5 | ಅಧೀಕ್ಷಕರು | 8 | 4 | 2 | 1 | 15 |
| 6 | ಶೀಘ್ರಲಿಪಿಗಾರರು | 2 | 1 | 1 | 0 | 4 |
| 7 | ಲೆಕ್ಕ ಪ್ರಥಮ ದರ್ಜೆ ಸಹಾಯಕರು | 0 | 0 | 0 | 0 | 0 |
| 8 | ಪ್ರಥಮ ದರ್ಜೆ ಸಹಾಯಕರು | 76 | 48 | 26 | 12 | 162 |
| 9 | ದ್ವಿತೀಯ ದರ್ಜೆ ಸಹಾಯಕರು | 224 | 94 | 21 | 8 | 347 |
| 10 | ಸಿಸಿಟಿ | 16 | 4 | 4 | 5 | 29 |
| 11 | ಬೆರಳಚ್ಚುಗಾರರು | 0 | 8 | 0 | 0 | 8 |
| 12 | ವಾಹನ ಚಾಲಕರು | 4 | 3 | 3 | 7 | 17 |
| 13 | ಅಟೆಂಡರ್/ ವಿಜ್ಞಾನ ಸಹಾಯಕರು | 15 | 21 | 8 | 16 | 60 |
| 14 | ಸೇವಕರು | 210 | 165 | 137 | 52 | 564 |
| | ಒಟ್ಟು | 568 | 348 | 203 | 101 | 1220 |

ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ಸಾಮಾನ್ಯ).

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 940

ಮಾನ್ಯ ಸದಸ್ಯರ ಹೆಸರು : ಶ್ರೀ.ಜಾರ್ಜ್ ಕೆ.ಜೆ (ಸರ್ವಜ್ಞನಗರ)

ಉತ್ತರಿಸಬೇಕಾದ ದಿನಾಂಕ : 24-09-2020

ಉತ್ತರಿಸುವ ಸಚಿವರು : ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಇಲ್ಲಿಯವರೆಗೆ ಎಷ್ಟು ಕೋವಿಡ್-19 ಟೆಸ್ಟ್‌ಗಳನ್ನು ನಡೆಸಲಾಗಿದೆ; (ಜಿಲ್ಲಾವಾರು ಮಾಹಿತಿ ನೀಡುವುದು). | ರಾಜ್ಯದಲ್ಲಿ ದಿನಾಂಕ:20.09.2020 ರವರೆಗೆ 42,79,067 ಕೋವಿಡ್-19 ಟೆಸ್ಟ್‌ಗಳನ್ನು ನಡೆಸಲಾಗಿದೆ. ಜಿಲ್ಲಾವಾರು ಮಾಹಿತಿಯನ್ನು ಅನುಬಂಧ-1ರಲ್ಲಿ ಲಗತ್ತಿಸಿದೆ. |
| ಆ | ಯಾವ ಯಾವ ವಿಧದ ಟೆಸ್ಟ್‌ಗಳನ್ನು ಮಾಡಲಾಗಿದೆ; (ಜಿಲ್ಲಾವಾರು ಮಾಹಿತಿ ನೀಡುವುದು). | ಕೋವಿಡ್-19 ಪತ್ತೆ ಹಚ್ಚುವಿಕೆಗೆ ರ್‍ಯಾಪಿಡ್ ಆಂಟಿಜನ್ ಮತ್ತು RT-PCR ಟೆಸ್ಟ್‌ಗಳನ್ನು ಮಾಡಲಾಗಿದೆ.ಜಿಲ್ಲಾವಾರು ಮಾಹಿತಿಯನ್ನು ಅನುಬಂಧ-2ರಲ್ಲಿ ಲಗತ್ತಿಸಿದೆ. |
| ಇ | ಟೆಸ್ಟ್ ಮಾಡಲು ಸರ್ಕಾರಿ ಮತ್ತು ಖಾಸಾಗಿ ಆಸ್ಪತ್ರೆಗಳಲ್ಲಿ ತೆರೆದಿರುವ ಲ್ಯಾಬ್‌ಗಳೆಷ್ಟು?. | ಕೋವಿಡ್-19 ಟೆಸ್ಟ್‌ಗಳನ್ನು ಒಟ್ಟು 52 ಸರ್ಕಾರಿ ಲ್ಯಾಬ್‌ಗಳಲ್ಲಿ ಹಾಗೂ 84 ಖಾಸಗಿ ಲ್ಯಾಬ್‌ಗಳಲ್ಲಿ ನಡೆಸಲಾಗುತ್ತಿದೆ. |

ಆಕುಕ 96 ಎಸ್‌ಎಂಎಂ 2020

(ಬಿ.ಶ್ರೀರಾಮುಲು)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು

## ಅನುಬಂಧ-1

## (ಕೋವಿಡ್-19 ಪರೀಕ್ಷೆಗಳ ಜಿಲ್ಲಾವಾರು ಮಾಹಿತಿ (02.01.2020 ರಿಂದ ಇಲ್ಲಿಯವರೆಗೂ)

## (ಮೂಲ ಐಸಿಎಂಆರ್ ಪೋರ್ಟಲ್)

| ಕ್ರ.ಸಂಖ್ಯೆ | ಜಿಲ್ಲೆಗಳು | ಒಟ್ಟು ಪರೀಕ್ಷೆ |
|---|---|---|
| 1 | ಬಾಗಲಕೋಟೆ | 92815 |
| 2 | ಬಳ್ಳಾರಿ | 165412 |
| 3 | ಬೆಳಗಾವಿ | 141706 |
| 4 | ಬೆಂಗಳೂರು (ಗ್ರಾ) | 55431 |
| 5 | ಬೆಂಗಳೂರು (ನ) | 1433098 |
| 6 | ಬೀದರ್ | 100090 |
| 7 | ಚಾಮರಾಜನಗರ | 56268 |
| 8 | ಚಿಕ್ಕಬಳ್ಳಾಪುರ | 102552 |
| 9 | ಚಿಕÀ◌್ಕಮಗಳೂರು | 51722 |
| 10 | ಚಿತ್ರದುರ್ಗ | 61175 |
| 11 | ದಕ್ಷಿಣಕನ್ನಡ | 134640 |
| 12 | ದಾವಣಗೆರೆ | 128700 |
| 13 | ಧಾರವಾಡ | 124416 |
| 14 | ಗದಗ | 66464 |
| 15 | ಹಾಸನ | 100735 |
| 16 | ಹಾವೇರಿ | 68898 |
| 17 | ಕಲಬುರಗಿ | 208735 |
| 18 | ಕೊಡಗು | 36015 |
| 19 | ಕೋಲಾರ | 66604 |
| 20 | ಕೊಪ್ಪಳ | 90413 |
| 21 | ಮಂಡ್ಯ | 111438 |
| 22 | ಮೈಸೂರು | 162138 |
| 23 | ರಾಯಚೂರು | 106134 |
| 24 | ರಾಮನಗರ | 46782 |
| 25 | ಶಿವಮೊಗ್ಗ | 88017 |
| 26 | ತುಮಕೂರು | 108851 |
| 27 | ಉಡುಪಿ | 105820 |
| 28 | ಉತ್ತರಕನ್ನಡ | 93132 |
| 29 | ವಿಜಯಾಪುರ | 94373 |
| 30 | ಯಾದಗಿರಿ | 76493 |
| | ಒಟ್ಟು | 4279067 |

## ಅನುಬಂಧ-2

### ವಿವಿಧ ರೀತಿಯ ಪರೀಕ್ಷೆಗಳ ಜಿಲ್ಲಾವಾರು ಮಾಹಿತಿ (02.01.2020ರಿಂದ)

| ಕ್ರ.ಸಂ | ಜಿಲ್ಲೆಗಳು | ಪರೀಕ್ಷಾ ವಿಧಾನ | | |
|---|---|---|---|---|
| | | ಆರ್ ಟಿ ಪಿಸಿಆರ್ ಮತ್ತು ಇತರೆ | ತ್ವರಿತ ಆಂಟಿಜನ್ ಪರೀಕ್ಷೆ | ಒಟ್ಟು ಪರೀಕ್ಷೆ |
| 1 | ಬಾಗಲಕೋಟೆ | 39613 | 53202 | 92815 |
| 2 | ಬಳ್ಳಾರಿ | 66494 | 98918 | 165412 |
| 3 | ಬೆಳಗಾವಿ | 79598 | 62108 | 141706 |
| 4 | ಬೆಂಗಳೂರು (ಗ್ರಾ) | 30043 | 25388 | 55431 |
| 5 | ಬೆಂಗಳೂರು (ನ) | 1083696 | 349402 | 1433098 |
| 6 | ಬೀದರ್ | 82149 | 17941 | 100090 |
| 7 | ಚಾಮರಾಜನಗರ | 37021 | 19247 | 56268 |
| 8 | ಚಿಕ್ಕಬಳ್ಳಾಪುರ | 52152 | 50400 | 102552 |
| 9 | ಚಿಕÀ◌್ಕಮಗಳೂರು | 32321 | 19401 | 51722 |
| 10 | ಚಿತ್ರದುರ್ಗ | 44389 | 16786 | 61175 |
| 11 | ದಕ್ಷಿಣಕನ್ನಡ | 76984 | 57656 | 134640 |
| 12 | ದಾವಣಗೆರೆ | 82293 | 46407 | 128700 |
| 13 | ಧಾರವಾಡ | 72320 | 52096 | 124416 |
| 14 | ಗದಗ | 31601 | 34863 | 66464 |
| 15 | ಹಾಸನ | 58708 | 42027 | 100735 |
| 16 | ಹಾವೇರಿ | 39272 | 29626 | 68898 |
| 17 | ಕಲಬುರಗಿ | 155705 | 53030 | 208735 |
| 18 | ಕೊಡಗು | 25799 | 10216 | 36015 |
| 19 | ಕೋಲಾರ | 48011 | 18593 | 66604 |
| 20 | ಕೊಪ್ಪಳ | 48860 | 41553 | 90413 |
| 21 | ಮಂಡ್ಯ | 64037 | 47401 | 111438 |
| 22 | ಮೈಸೂರು | 83503 | 78635 | 162138 |
| 23 | ರಾಯಚೂರು | 62970 | 43164 | 106134 |
| 24 | ರಾಮನಗರ | 28901 | 17881 | 46782 |
| 25 | ಶಿವಮೊಗ್ಗ | 57853 | 30164 | 88017 |
| 26 | ತುಮಕೂರು | 67928 | 40923 | 108851 |
| 27 | ಉಡುಪಿ | 60366 | 45454 | 105820 |
| 28 | ಉತ್ತರಕನ್ನಡ | 55835 | 37297 | 93132 |
| 29 | ವಿಜಯಾಪುರ | 57476 | 36897 | 94373 |
| 30 | ಯಾದಗಿರಿ | 57842 | 18651 | 76493 |
| ಒಟ್ಟು | | **2783740** | **1495327** | **4279067** |

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1221
ಸದಸ್ಯರ ಹೆಸರು : ಶ್ರೀ ಉಮಾನಾಥ ಎ ಕೋಟ್ಯಾನ್ (ಮೂಡಬಿದ್ರೆ)
ಉತ್ತರಿಸಬೇಕಾದ ದಿನಾಂಕ : 24.09.2020
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು

<table>
<tr><th>ಕ್ರಸ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಮೂಡಬಿದರೆ/ಮೂಲ್ಕಿ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿರುವ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಶಾಲೆಗಳಿಗೆ ಶಾಲಾ ಕಟ್ಟಡ ಮತ್ತು ಇತರ ಅವಶ್ಯಕ ಮೂಲಭೂತ ಸೌಕರ್ಯಗಳನ್ನು ಪೂರ್ಣ ಪ್ರಮಾಣದಲ್ಲಿ ಒದಗಿಸಲಾಗಿದೆಯೇ ಹಾಗಿದ್ದಲ್ಲಿ ಈ ಸಂಬಂಧ ಕೈಗೊಂಡಿರುವ ಕ್ರಮಗಳು ಯಾವುವು;</td><td>ಒದಗಿಸಲಾಗಿದೆ.<br><br>ಮೂಡಬಿದ್ರೆ/ಮೂಲ್ಕಿ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಕಳೆದ ಮೂರು ವರ್ಷಗಳಲ್ಲಿ ಪ್ರಾಥಮಿಕ ಮತ್ತು ಪ್ರೌಢಶಾಲೆಗಳಲ್ಲಿನ ಮೂಲಭೂತ ಸೌಕರ್ಯಗಳಿಗೆ ಬಿಡುಗಡೆಯಾಗಿರುವ ಅನುದಾನದ ವಿವರ ಈ ಕೆಳಕಂಡಂತಿದೆ.<br><br>ರೂ.ಲಕ್ಷಗಳಲ್ಲಿ<br><table><tr><th rowspan="2">ವರ್ಷ</th><th colspan="2">ಪ್ರಾಥಮಿಕ</th><th colspan="2">ಪ್ರೌಢ</th></tr><tr><th>ಕೊಠಡಿ</th><th>ಅನುದಾನ</th><th>ಕೊಠಡಿ</th><th>ಅನುದಾನ</th></tr><tr><td>2017–18</td><td>3</td><td>3.30</td><td>11</td><td>64.16</td></tr><tr><td>2018–19</td><td>5</td><td>3.25</td><td>8</td><td>25.35</td></tr><tr><td>2019–20</td><td>18</td><td>38.94</td><td>0</td><td>0.00</td></tr><tr><td>ಒಟ್ಟು</td><td>26</td><td>45.49</td><td>19</td><td>89.51</td></tr></table><br>ಪ್ರಾಥಮಿಕ ಶಾಲೆಗಳ ಪಟ್ಟಿ ಅನುಬಂಧ–1ರಲ್ಲಿ ಒದಗಿಸಿದೆ<br>ಪ್ರೌಢ ಶಾಲೆಗಳ ಪಟ್ಟಿ ಅನುಬಂಧ–2ರಲ್ಲಿ ಒದಗಿಸಿದೆ</td></tr>
<tr><td>ಆ)</td><td>ಆ ಪೈಕಿ ಎಷ್ಟು ಶಾಲೆಗಳು ಸರಕಾರಿ ಕಟ್ಟಡಗಳಲ್ಲಿ ಕಾರ್ಯ ನಿರ್ವಹಿಸುತ್ತಿವೆ; ಎಷ್ಟು ಶಾಲೆಗಳಿಗೆ ಕಟ್ಟಡಗಳು ಮತ್ತು ಹೆಚ್ಚುವರಿ ಕೊಠಡಿಗಳು ಅವಶ್ಯಕವಾಗಿವೆ; (ವಿವರ ನೀಡುವುದು)</td><td>ಸರ್ಕಾರಿ ಕಟ್ಟಡಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಶಾಲೆಗಳ ಮಾಹಿತಿ ಕೆಳಗಿನಂತಿದೆ.<br><table><tr><th></th><th>ಶಾಲೆಗಳ ಸಂಖ್ಯೆ</th></tr><tr><td>ಪ್ರಾಥಮಿಕ</td><td>105</td></tr><tr><td>ಪ್ರೌಢ</td><td>21</td></tr><tr><td>ಒಟ್ಟು</td><td>126</td></tr></table><br>ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಜೋಕಟ್ಟೆ, ಮಂಗಳೂರು</td></tr>
</table>

| | | |
|---|---|---|
| | | ಉತ್ತರ ವಲಯ ಈ ಒಂದು ಶಾಲೆ ಬಾಡಿಗೆ ಕಟ್ಟಡದಲ್ಲಿ ನಡೆಯುತ್ತಿದೆ.<br><br>ಮೂಡಬಿದ್ರೆ ವಿಧಾನ ಸಭಾ ಕ್ಷೇತ್ರದ 3 ಶಾಲೆಗಳಲ್ಲಿ 7 ಹೆಚ್ಚುವರಿ ಬೋಧನಾ ಕೊಠಡಿಗಳು ಅವಶ್ಯಕವಿರುತ್ತದೆ. ವಿವರವನ್ನು **ಅನುಬಂಧ-3** ರಲ್ಲಿ ಒದಗಿಸಲಾಗಿದೆ. |
| ಇ) | ಸರ್ಕಾರಿ ಶಾಲೆಗಳಿಗೆ ಹೆಚ್ಚಿನ ಪ್ರಾಶಸ್ತ್ಯ ಕೊಡುವ ನಿಟ್ಟಿನಲ್ಲಿ ಬಡಜನರ ಶೈಕ್ಷಣಿಕಾಭಿವೃದ್ಧಿಗೆ ಕ್ರಮ ಜರುಗಿಸಲಾಗುವುದೇ? | ಹೌದು.<br><br>ಈ ನಿಟ್ಟಿನಲ್ಲಿ ಸರ್ಕಾರವು ಉಚಿತ ಸಮವಸ್ತ್ರ, ಉಚಿತ ಶೂ-ಸಾಕ್ಸ್, ಉಚಿತ ಪಠ್ಯಪುಸ್ತಕ, ಉಚಿತ ಬೈಸಿಕಲ್ ಮಧ್ಯಾಹ್ನ ಉಪಹಾರ ಯೋಜನೆ, ಕ್ಷೀರ ಭಾಗ್ಯ, ಕಂಪ್ಯೂಟರ್ ಶಿಕ್ಷಣ ಮುಂತಾದ ಪ್ರೋತ್ಸಾಹಕ ಯೋಜನೆಗಳ ಮೂಲಕ ಸರ್ಕಾರಿ ಶಾಲಾ ಮಕ್ಕಳಿಗೆ ಪ್ರಾಶಸ್ತ್ಯ ನೀಡಿ ಬಡಜನರ ಶೈಕ್ಷಣಿಕಾಭಿವೃದ್ಧಿಗೆ ಕ್ರಮವಹಿಸಲಾಗುತ್ತಿದೆ. |

**ಇಪಿ 181 ಯೋಸಕ 2020**

S. S—

(ಎಸ್.ಸುರೇಶ್ ಕುಮಾರ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು

1221

## ಅನುಬಂಧ-1

### ಪ್ರಾಥಮಿಕ ಶಾಲೆಗಳಿಗೆ ಮೂಡಬಿದ್ರೆ ವಿಧಾನ ಸಭಾ ಕ್ಷೇತ್ರಕ್ಕೆ ಬಿಡುಗಡೆಯಾದ ಅನುದಾನದ ವಿವರ

**2017-18**

| ಕ್ರ ಸಂ | ಶಾಲೆಯ ಹೆಸರು ಮತ್ತು ವಿಳಾಸ | ಡೈಸ್ ಸಂಖ್ಯೆ | ದುರಸ್ತಿ/ ಮರು ನಿರ್ಮಾಣ | ಭೌತಿಕ (ಕೊಠಡಿಗಳ ಸಂಖ್ಯೆ) | ನಿಗದಿತ ಮೊತ್ತ (ರೂ ಲಕ್ಷಗಳಲ್ಲಿ) |
|---|---|---|---|---|---|
| 1 | ಸ.ಹಿ.ಪ್ರಾ.ಶಾಲೆ ಮುಳಿಬೆಟ್ಟು | 29240700502 | ದುರಸ್ತಿ | 1 | 1.00 |
| 2 | ಸ.ಕಿ.ಪ್ರಾ.ಶಾಲೆ ಕವತ್ತಾರು | 29240304801 | ದುರಸ್ತಿ | 2 | 2.00 |
| 3 | ಸ.ಹಿ.ಪ್ರಾ.ಶಾಲೆ ಬೆಳುವಾಯಿ | 29240700202 | ದುರಸ್ತಿ | ರ್‍ಯಾಂಪ್ | 0.30 |
| | ಒಟ್ಟು | | | | 3.30 |

**2018-19**

| | | | | | |
|---|---|---|---|---|---|
| 1 | ಸ.ಕಿ.ಪ್ರಾ.ಶಾಲೆ ಗುತ್ತುಕರಿಂಜ | 29240703606 | ದುರಸ್ತಿ | 1 | 1.00 |
| 2 | ಸ.ಕಿ.ಪ್ರಾ.ಶಾಲೆ ಮುಕ್ಕಿ | 29240309904 | ದುರಸ್ತಿ | 1 | 1.00 |
| 3 | ಸ.ಕಿ.ಪ್ರಾ.ಶಾಲೆ ತಂಡ್ರಕೆರೆ | 29240701102 | ದುರಸ್ತಿ | 1 | 1.05 |
| 4 | ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್ ಹಿರಿಯ ಪ್ರಾಥಮಿಕ ಶಾಲೆ, ಮೂಡಬಿದ್ರಿ, ಮಾರ್ಪಾಡಿ, (ಪೂರ್ವ ಭಾಗ) | 29240702708 | ದುರಸ್ತಿ | ಕಿಟಕಿ, ಬಾಗಿಲು, ದುರಸ್ತಿ | 0.10 |
| 5 | ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್ ಹಿರಿಯ ಪ್ರಾಥಮಿಕ ಶಾಲೆ, ಮೂಡಬಿದ್ರಿ, ಮಾರ್ಪಾಡಿ, (ಪಶ್ಚಿಮ ಭಾಗ) | 29240702708 | ದುರಸ್ತಿ | ಕಿಟಕಿ ಬಾಗಿಲು, ದುರಸ್ತಿ | 0.10 |
| | ಒಟ್ಟು | | | | 3.25 |

**2019-20**

| ಕ್ರ ಸಂ | ಶಾಲೆಯ ಹೆಸರು ಮತ್ತು ವಿಳಾಸ | ಡೈಸ್ ಸಂಖ್ಯೆ | | ಭೌತಿಕ (ಕೊಠಡಿಗಳ ಸಂಖ್ಯೆ) | ನಿಗದಿತ ಮೊತ್ತ (ರೂ ಲಕ್ಷಗಳಲ್ಲಿ) |
|---|---|---|---|---|---|
| 1 | ಸ.ಹಿ.ಪ್ರಾ.ಶಾಲೆ ದರೆಗುಡ್ಡೆ | 29240700301 | ದುರಸ್ತಿ | 4 | 2.136 |
| 2 | ದ.ಕ.ಜಿ.ಪ ಸ.ಹಿ.ಪ್ರಾ.ಶಾಲೆ ಬೋರೆಗುಡ್ಡೆ | 29240307405 | ದುರಸ್ತಿ | 1 | 2.00 |
| 3 | ದ.ಕ.ಜಿ.ಪ ಸ.ಹಿ.ಪ್ರಾ.ಶಾಲೆ ಕೆಂಜಾರು | 29240301501 | ದುರಸ್ತಿ | 1 | 3.00 |
| 4 | ದ.ಕ.ಜಿ.ಪ ಸ.ಹಿ.ಪ್ರಾ.ಶಾಲೆ ಬೋಳೂರು [illegible] | 29240305602 | ದುರಸ್ತಿ | 1 | 2.00 |
| 5 | ದ.ಕ.ಜಿ.ಪ ಸ.ಹಿ.ಪ್ರಾ.ಶಾಲೆ ಕರಂಬಾರು | 29240308003 | ದುರಸ್ತಿ | 1 | 2.00 |
| 6 | ದ.ಕ.ಜಿ.ಪ ಸ.ಹಿ.ಪ್ರಾ.ಶಾಲೆ ಬಡಗಎಕ್ಕಾರು | 29240307801 | ದುರಸ್ತಿ | 1 | 2.00 |
| 7 | ದ.ಕ.ಜಿ.ಪ ಸ.ಹಿ.ಪ್ರಾ.ಶಾಲೆ ಕೈಕೊಡೆ | 29240306201 | ದುರಸ್ತಿ | 1 | 2.50 |
| 8 | ದ.ಕ.ಜಿ.ಪಂ. ಹಿ.ಪ್ರಾ.ಶಾಲೆ, ಮೂಡುಶೆಡ್ಡೆ | 29240605303 | ದುರಸ್ತಿ | 1 | 2.00 |
| 9 | ಸ.ಹಿ.ಪ್ರಾ.ಶಾಲೆ ಪೂಪಾಡಿಕಲ್ಲು | 29240700501 | ದುರಸ್ತಿ | 1 | 3.00 |
| 10 | ಸ.ಹಿ.ಪ್ರಾ.ಶಾಲೆ.ಪುಚ್ಚಮೊಗರು | 29240701801 | ದುರಸ್ತಿ | 1 | 2.00 |
| 11 | ಸ.ಹಿ.ಪ್ರಾ.ಶಾಲೆ.ಕಲ್ಲಬೆಟ್ಟು | 29240704001 | ದುರಸ್ತಿ | 1 | 3.00 |
| 12 | ಸ.ಹಿ.ಪ್ರಾ.ಶಾಲೆ ಮಾರೂರು ಹೊಸಂಗಡಿ | 29240704206 | ದುರಸ್ತಿ | 1 | 3.00 |
| 13 | ಸ.ಹಿ.ಪ್ರಾ.ಶಾಲೆ ಪಣಪಿಲ | 29240701701 | ದುರಸ್ತಿ | 1 | 2.00 |
| 14 | ಸರಕಾರಿ ಹಿರಿಯ ಪ್ರಾಥಮಿಕ ಶಾಲೆ ನೀರ್ಕೆರೆ | 29240702101 | | ಸೇರ್ಪಡೆ- ಮಾರ್ಪಾಡು | 1.66 |
| 15 | ಸರಕಾರಿ ಹಿರಿಯ ಪ್ರಾಥಮಿಕ ಶಾಲೆ ಮಿಜಾರು | 29240700103 | | ಸೇರ್ಪಡೆ- ಮಾರ್ಪಾಡು | 1.66 |
| 16 | ಸರಕಾರಿ ಹಿರಿಯ ಪ್ರಾಥಮಿಕ ಶಾಲೆ ದರೆಗುಡ್ಡೆ | 29240700301 | | ಸೇರ್ಪಡೆ- ಮಾರ್ಪಾಡು | 1.66 |
| 17 | ಸರಕಾರಿ ಹಿರಿಯ ಪ್ರಾಥಮಿಕ ಶಾಲೆ ಕೆಲ್ಲಪುತ್ತಿಗೆ | 29240700801 | | ಸೇರ್ಪಡೆ- ಮಾರ್ಪಾಡು | 1.66 |
| 18 | ಸರಕಾರಿ ಮಾದರಿ ಹಿರಿಯ ಪ್ರಾಥಮಿಕ ಶಾಲೆ ಬೆಳುವಾಯಿ ಮೈನ್ | 29240700204 | | ಸೇರ್ಪಡೆ- ಮಾರ್ಪಾಡು | 1.66 |
| | ಒಟ್ಟು | | | | 38.936 |

(signature) 22.09.20

ಸಹನಿರ್ದೇಶಕರು(ಶಾಲಾ ಶಿಕ್ಷಣ)

ಅನುಬಂಧ-2

## ಪ್ರೌಢಶಾಲೆಗಳಿಗೆ ಮೂಡಬಿದ್ರೆ ವಿಧಾನ ಸಭಾ ಕ್ಷೇತ್ರಕ್ಕೆ ಬಿಡುಗಡೆಯಾದ ಅನುದಾನದ ವಿವರ

| ಕ್ರ ಸಂ | ಶಾಲೆಯ ಹೆಸರು ಮತ್ತು ವಿಳಾಸ | ಡೈಸ್ ಸಂಖ್ಯೆ | ದುರಸ್ತಿ/ ಮರು ನಿರ್ಮಾಣ | ಭೌತಿಕ (ಕೊಠಡಿಗಳ ಸಂಖ್ಯೆ) | ನಿಗದಿತ ಮೊತ್ತ (ರೂ ಲಕ್ಷಗಳಲ್ಲಿ) |
|---|---|---|---|---|---|
| **2017-18** | | | | | |
| 1 | ಸರ್ಕಾರಿ ಪ್ರೌಢಶಾಲೆ ಮುಲ್ಕಿ | 29240309916 | ದುರಸ್ತಿ | 1 | 25.00 |
| 2 | ನೇತಾಜಿ ಸುಭಾಷ್ ಚಂದ್ರ ಬೋಸ್ ಸರ್ಕಾರಿ ಪ್ರೌಢಶಾಲೆ ಮೂಡು ಮಾರ್ನಾಡು | 29240701103 | ದುರಸ್ತಿ | 1 | 15.00 |
| 3 | ಸರ್ಕಾರಿ ಪ್ರೌಢಶಾಲೆ ಹೊಸಬೆಟ್ಟು | 29240700404 | ದುರಸ್ತಿ | 1 | 3.00 |
| 4 | ಸರ್ಕಾರಿ ಪ್ರೌಢಶಾಲೆ ಅಳಿಯೂರು | 29240702305 | ದುರಸ್ತಿ | 1 | 2.00 |
| 5 | ಸರ್ಕಾರಿ ಪ್ರೌಢಶಾಲೆ ದರೆಗುಡ್ಡೆ | 29240700302 | ದುರಸ್ತಿ | 1 | 5.00 |
| 6 | ಸರ್ಕಾರಿ ಪ್ರೌಢಶಾಲೆ ಮಿಜಾರು | 29240700105 | ದುರಸ್ತಿ | 1 | 10.00 |
| 7 | ಸರ್ಕಾರಿ ಪ್ರೌಢಶಾಲೆ ಪಡುಕೋಣಾಜೆ | 29240701402 | ದುರಸ್ತಿ | 1 | 1.00 |
| 8 | ಸರ್ಕಾರಿ ಪ್ರೌಢಶಾಲೆ ಪಡುಕೋಣಾಜೆ | 29240701402 | ದುರಸ್ತಿ | ಮೆಟ್ಟಿಲು | 0.40 |
| 9 | ಸರಕಾರಿ ಪ್ರೌಢಶಾಲೆ ನೆಲ್ಲಿಕಾರು | 29240701206 | | ಸೇರ್ಪಡೆ- ಮಾರ್ಪಾಡು | 1.00 |
| 10 | ಸರಕಾರಿ ಪ್ರೌಢಶಾಲೆ ಹೊಸಬೆಟ್ಟು | 29240700404 | | ಸೇರ್ಪಡೆ- ಮಾರ್ಪಾಡು | 1.00 |
| 11 | ಸರಕಾರಿ ಪ್ರೌಢಶಾಲೆ ಪ್ರಾಂತ್ಯ | 29240703305 | | ಸೇರ್ಪಡೆ- ಮಾರ್ಪಾಡು | 0.76 |
| | ಒಟ್ಟು | | | | **64.16** |
| **2018-19** | | | | | |
| 1 | ಸರ್ಕಾರಿ ಪ್ರೌಢಶಾಲೆ ನೀರ್ಕೆರೆ. | 29240702104 | ಮರು ನಿರ್ಮಾಣ | 1 | 15.75 |
| 2 | ಸರ್ಕಾರಿ ಪ್ರೌಢಶಾಲೆ ದರೆಗುಡ್ಡೆ | 29240700302 | ದುರಸ್ತಿ | 1 | 1.80 |
| 3 | ಸರ್ಕಾರಿ ಪ್ರೌಢಶಾಲೆ ಹೊಸಬೆಟ್ಟು | 29240700404 | ದುರಸ್ತಿ | 1 | 1.00 |
| 4 | ಸರ್ಕಾರಿ ಪ್ರೌಢಶಾಲೆ ಪ್ರಾಂತ್ಯ | 29240703305 | ದುರಸ್ತಿ | 1 | 1.00 |
| 5 | ಸರಕಾರಿ ಪ್ರೌಢ ಶಾಲೆ ಮಿಜಾರು | 29240700105 | | ಸೇರ್ಪಡೆ- ಮಾರ್ಪಾಡು | 2.50 |
| 6 | ಸರಕಾರಿ ಪ್ರೌಢ ಶಾಲೆ ಅಳಿಯೂರು | 29240702305 | | ಸೇರ್ಪಡೆ- ಮಾರ್ಪಾಡು | 1.30 |
| 7 | ಸರಕಾರಿ ಪ್ರೌಢ ಶಾಲೆ ಪಡುಕೋಣಾಜೆ | 29240701402 | | ಸೇರ್ಪಡೆ- ಮಾರ್ಪಾಡು | 1.00 |
| 8 | ಸರಕಾರಿ ಪ್ರೌಢ ಶಾಲೆ ಮೂಡುಮಾರ್ನಾಡು | 29240701103 | | ಸೇರ್ಪಡೆ- ಮಾರ್ಪಾಡು | 1.00 |
| | ಒಟ್ಟು | | | | **25.35** |

22.09.20

ಸಹನಿರ್ದೇಶಕರು(ಶಾಲಾ ಶಿಕ್ಷಣ)

ಅನುಬಂಧ-3

ಮೂಡಬಿದ್ರೆ/ಮೂಲ್ಕಿ ವಿಧಾನಸಭಾ ಕ್ಷೇತ್ರದಲ್ಲಿ ಹೆಚ್ಚುವರಿ ಕೊಠಡಿ ಅಗತ್ಯವಿರುವ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳ ವಿವರ

| ಕ್ರ ಸಂ | ಶಾಲೆಯ ಹೆಸರು ಮತ್ತು ವಿಳಾಸ | ಡೈಸ್ ಸಂಖ್ಯೆ | ಮಕ್ಕಳ ಸಂಖ್ಯೆ | ಹಾಲಿ ಇರುವ ಕೊಠಡಿಗಳ ಸಂಖ್ಯೆ | ನೆಲಸಮಗೊಳಿಸಿ ಮರು ನಿರ್ಮಾಣ ಕೊಠಡಿ ಬೇಡಿಕೆ | ಬೋಧನೆಗಾಗಿ ಹೆಚ್ಚುವರಿ ಕೊಠಡಿ ಬೇಡಿಕೆ |
|---|---|---|---|---|---|---|
| | | | | | ಭೌತಿಕ | ಭೌತಿಕ |
| 1 | ಸರಕಾರಿ ಪ್ರೌಢ ಶಾಲೆ ಬಡಗ ಎಕ್ಕಾರು | 29240307802 | 71 | 4 | 0 | 2 |
| 2 | ಸ.ಹಿ.ಪ್ರಾ.ಶಾಲೆ ಅಳಿಯೂರು | 29240702301 | 192 | 4 | 0 | 3 |
| 3 | ಸ.ಹಿ.ಪ್ರಾ.ಶಾಲೆ ವಿದ್ಯಾಗಿರಿ | 29240700603 | 77 | 4 | 0 | 2 |
| ಒಟ್ಟು | | | 340 | 12 | 0 | 7 |

22.09.20

ಸಹನಿರ್ದೇಶಕರು(ಶಾಲಾ ಶಿಕ್ಷಣ)



## ಕರ್ನಾಟಕ ವಿಧಾನ ಸಭೆ

| | | |
|---|---|---|
| 1) | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1222 |
| 2) | ಮಾನ್ಯ ಸದಸ್ಯರ ಹೆಸರು | ಶ್ರೀ ಉಮಾನಾಥ ಎ. ಕೋಟ್ಯಾನ್ (ಮೂಡಬಿದ್ರೆ) |
| 3) | ಉತ್ತರಿಸಬೇಕಾದ ದಿನಾಂಕ | 24/09/2020 |
| 4) | ಉತ್ತರಿಸುವವರು | **ಮಾನ್ಯ ಉಪ ಮುಖ್ಯಮಂತ್ರಿಗಳು ಮತ್ತು ಉನ್ನತ ಶಿಕ್ಷಣ, ಐಟಿ/ಬಿಟಿ ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು.** |

| ಪ್ರಶ್ನೆ | ಉತ್ತರ |
|---|---|
| (ಅ) ರಾಜ್ಯದಲ್ಲಿ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖಾ ಯೋಜನೆಗಳು ಯೋಜನಾನುಷ್ಠಾನ ಮತ್ತು ಗುರಿ ಸಾಧನೆಗಳಾವುವು; (ಎರಡು ವರ್ಷಗಳ ವಿವರ ನೀಡುವುದು) | **ಕೌಶಲ್ಯ ಮಿಷನ್**<br>ಇಲಾಖೆಯು ಅನುಷ್ಠಾನಗೊಳಿಸುತ್ತಿರುವ ವಿವಿಧ ತರಬೇತಿ ಯೋಜನೆಗಳ ಭೌತಿಕ ಗುರಿ ಮತ್ತು ಸಾಧನೆಗಳ ವಿವರಗಳು ಕೆಳಕಂಡಂತಿವೆ. ಮುಖ್ಯಮಂತ್ರಿಗಳ ಕೌಶಲ್ಯ ಕರ್ನಾಟಕ ಯೋಜನೆಯನ್ನು www.kaushalkar.com ವೆಬ್ ಪೋರ್ಟಲ್‌ನಲ್ಲಿ ನೋಂದಾಯಿಸಿ ಅಭ್ಯರ್ಥಿಗಳಿಗೆ ಹಾಗೂ ಇಲಾಖೆಯಿಂದ ಮಾನ್ಯತೆ ಪಡೆದ ಸರ್ಕಾರಿ / ಸರ್ಕಾರೇತರ ತರಬೇತಿ ಸಂಸ್ಥೆಗಳ ಮೂಲಕ ಹಾಗೂ ಪಿ.ಎಂ.ಕೆ.ವಿ.ವೈ. ಕೇಂದ್ರ ಪುರಸ್ಕೃತ ಯೋಜನೆಯಾಗಿದ್ದು ಕೇಂದ್ರ ಸರ್ಕಾರದಿಂದ ಮಾನ್ಯತೆ ಪಡೆದ ತರಬೇತಿ ಸಂಸ್ಥೆಗಳ ಮೂಲಕ ಈ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ. |

**ಮುಖ್ಯಮಂತ್ರಿಗಳ ಕೌಶಲ್ಯ ಕರ್ನಾಟಕ ಯೋಜನೆ**

| ವರ್ಷ | ಗುರಿ (ಭೌತಿಕ) | ಸಾಧನೆ (ಭೌತಿಕ) |
|---|---|---|
| 2018–19 | 50000 | 19997 |
| 2019–20 | 56260 | 47121 |

**ಪ್ರದಾನಮಂತ್ರಿಗಳ ಕೌಶಲ್ಯ ವಿಕಾಸ ಯೋಜನೆ**

| ವರ್ಷ | ಗುರಿ (ಭೌತಿಕ) | ಸಾಧನೆ (ಭೌತಿಕ) |
|---|---|---|
| 2018–19 | 32000 | 545 |
| 2019–20 | 32164 | 13944 |

**ಸಿಡಾಕ್**

ಸಂಸ್ಥೆಯಿಂದ ಉದ್ಯಮಶೀಲತೆ ಕಾರ್ಯಕ್ರಮವನ್ನು ಕೈಗೊಳ್ಳಲು ಪ್ರೇರೇಪಿಸಲು ಒಂದರಿಂದ ಆರು ದಿನಗಳ ಉದ್ಯಮಶೀಲಾತಾಭಿವೃದ್ಧಿ ಕಾರ್ಯಕ್ರಮದಲ್ಲಿ ತರಬೇತಿಯನ್ನು ನೀಡಲಾಗುತ್ತಿದೆ. ಈ ಕಾರ್ಯಕ್ರಮದ ಒಟ್ಟಾರೆ ಗುರಿ ಸಾಧನೆಗಳು ಈ ಕೆಳಕಂಡಂತಿದೆ.

| ವರ್ಷ | ಗುರಿ | ಸಾಧನೆ |
|---|---|---|
| 2018–19 | 1,00,002 | 99,931 |
| 2019–20 | 22,340 | 23,016 |

**ಡೇ–ನಲ್ಮ್**

ಕೇಂದ್ರ ಪುರಸ್ಕೃತ ಯೋಜನೆಯಾದ ದೀನ್‌ದಯಾಳ್ ಅಂತ್ಯೋದಯ ಯೋಜನೆ–ರಾಷ್ಟ್ರೀಯ ನಗರ ಜೀವನೋಪಾಯ ಅಭಿಯಾನ ಯೋಜನೆಯನ್ನು ರಾಜ್ಯದ 277 ನಗರ ಸ್ಥಳೀಯ ಸಂಸ್ಥೆಗಳಲ್ಲಿ ಮಾನ್ಯತೆ ಪಡೆದ ಯೋಜನಾ ಅನುಷ್ಠಾನ ಸಂಸ್ಥೆಗಳಿಂದ ಅನುಷ್ಠಾನಗೊಳಿಸಲಾಗುತ್ತಿದೆ.

ಯೋಜನೆಯ ಅನುಷ್ಠಾನ ಗುರಿ ಮತ್ತು ಸಾಧನೆಯ ವಿವರಗಳು ಈ ಕೆಳಕಂಡಂತಿವೆ.

| ಕ್ರ ಸಂ | ಘಟಕದ ಹೆಸರು | 2018-19 ಭೌತಿಕ | | 2019-20 ಭೌತಿಕ | |
|---|---|---|---|---|---|
| | | ಗುರಿ | ಸಾಧನೆ | ಗುರಿ | ಸಾಧನೆ |
| 1 | ಕೌಶಲ್ಯ ತರಬೇತಿ ಮೂಲಕ ಉದ್ಯೋಗ ಮತ್ತು ಸ್ಥಳ ನಿಯುಕ್ತಿ | 15650 | 7250 | 24520 | 6792 |
| 2 | ಸ್ವಯಂ ಉದ್ಯೋಗ ಕಾರ್ಯಕ್ರಮ | 4000 | 2427 | 3200 | 1194 |

**ರಾಷ್ಟ್ರೀಯ ಗ್ರಾಮೀಣ ಜೀವನೋಪಾಯ ಅಭಿಯಾನ (NRLM)**

ಸಂಜೀವಿನಿ-ಕೆಎಸ್‌ಆರ್‌ಎಲ್‌ಪಿಎಸ್ ಸಂಸ್ಥೆಯಡಿ ಕೇಂದ್ರ ಪುರಸ್ಕೃತ ಯೋಜನೆಯಾದ **ದೀನ್ ದಯಾಳ್ ಉಪಾಧ್ಯಾಯ ಗ್ರಾಮೀಣ ಕೌಶಲ್ಯ ಯೋಜನೆ** ಯನ್ನು ಮಾನ್ಯತೆ ಪಡೆದ ಯೋಜನಾ ಅನುಷ್ಠಾನ ಸಂಸ್ಥೆಗಳಿಂದ ಅನುಷ್ಠಾನಗೊಳಿಸಲಾಗುತ್ತಿದ್ದು, ವಿವರಗಳು ಕೆಳಕಂಡಂತಿವೆ.

**ಡಿಡಿಯುಜಿಕೆವೈ ಯೋಜನೆ**

| ವರ್ಷ | ಗುರಿ | ಸಾಧನೆ |
|---|---|---|
| 2018-19 | 34000 | 9561 |
| 2019-20 | 20000 | 5807 |

**ಗ್ರಾಮೀಣ ಸ್ವ-ಉದ್ಯೋಗ ತರಬೇತಿ ಸಂಸ್ಥೆ (RSETI) / RUDSETI ಯೋಜನೆ**

| ವರ್ಷ | ಗುರಿ | ಸಾಧನೆ |
|---|---|---|
| 2018-19 | 24795 | 15984 |
| 2019-20 | 24388 | 21586 |

(ಆ) ಸರ್ಕಾರಿಗೂ ಉದ್ಯೋಗ ಕೌಶಲ್ಯವನ್ನು ಜೀವನೋಪಾಯಕ್ಕಾಗಿ ಕೌಶಲ್ಯಯುತ ವೃತ್ತಿಯನ್ನು ಒದಗಿಸಿ, ಯೋಜನೆಯನ್ನು ಯಶಸ್ವಿಯಾಗಿ ಜಾರಿಗೊಳಿಸುವಲ್ಲಿ ಸರ್ಕಾರದ ಕ್ರಮಗಳು ಯಾವುವು;

**ಕೌಶಲ್ಯ ಮಿಷನ್**

ಮುಖ್ಯಮಂತ್ರಿಗಳ ಕೌಶಲ್ಯ ಕರ್ನಾಟಕ ಯೋಜನೆ ಹಾಗೂ ಪ್ರಧಾನಮಂತ್ರಿಗಳ ಕೌಶಲ್ಯ ವಿಕಾಸ ಯೋಜನೆಗಳಡಿ ರಾಜ್ಯದ ಯುವಜನತೆಗೆ ಅಲ್ಪಾವಧಿ ಕೌಶಲ್ಯಾಧಾರಿತ ತರಬೇತಿ ಕಾರ್ಯಕ್ರಮಗಳನ್ನು 2017-18 ನೇ ಸಾಲಿನಿಂದ ಹಮ್ಮಿಕೊಂಡು ಯೋಜನೆಗಳನ್ನು ಜಾರಿಗೊಳಿಸಲಾಗಿದೆ.

**ಡೇ-ನಲ್ಮ್**

ಡೇ-ನಲ್ಮ್ ಅಭಿಯಾನದಡಿ ಕೌಶಲ್ಯ ತರಬೇತಿ ಮೂಲಕ ಉದ್ಯೋಗ ಮತ್ತು ಸ್ಥಳನಿಯುಕ್ತಿ ಉಪ ಘಟಕದಡಿ ರಾಜ್ಯದ 277 ನಗರ ಸ್ಥಳೀಯ ಸಂಸ್ಥೆಗಳಲ್ಲಿ ಮಾನ್ಯತೆ ಪಡೆದ ಯೋಜನಾ ಅನುಷ್ಠಾನ ಸಂಸ್ಥೆಗಳಿಂದ ಅನುಷ್ಠಾನಗೊಳಿಸಲಾಗುತ್ತದೆ. ಕೇಂದ್ರ ಸರ್ಕಾರವು ತಿಳಿಸಿದ ವಿವಿಧ ಕೌಶಲ್ಯಾಭಿವೃದ್ಧಿ ತರಬೇತಿ ಕಾರ್ಯಕ್ರಮಗಳನ್ನು ನಗರ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ಆಯೋಜಿಸಲಾಗುತ್ತಿರುತ್ತದೆ.

**ರಾಷ್ಟ್ರೀಯ ಗ್ರಾಮೀಣ ಜೀವನೋಪಾಯ ಅಭಿಯಾನ (NRLM)**

ಡಿಡಿಯುಜಿಕೆವೈ ಹಾಗೂ RSETI / RUDSETI ಯೋಜನೆಗಳು ಕೇಂದ್ರ ಪುರಸ್ಕೃತ ಯೋಜನೆಯಾಗಿದ್ದು, ಮಾನ್ಯತೆ ಪಡೆದ ಯೋಜನಾ ಅನುಷ್ಠಾನ

| | |
|---|---|
| | ಸಂಸ್ಥೆಗಳಿಂದ ಗ್ರಾಮೀಣ ಪ್ರದೇಶದ ನಿರುದ್ಯೋಗಿ ಯುವಕ ಯುವತಿಯರನ್ನು ಗುರುತಿಸಿ ಸೂಕ್ತ ತರಬೇತಿ ನೀಡಿ ಉದ್ಯೋಗ / ಸ್ವಯಂ ಉದ್ಯೋಗ ಕಲ್ಪಿಸುವ ಯೋಜನೆ ಅನುಷ್ಠಾನಗೊಳಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.<br><br>**ಸಿಡಾಕ್**<br>ಸಂಸ್ಥೆಯಿಂದ ತರಬೇತಿ ಪಡೆದ ಅಭ್ಯರ್ಥಿಗಳಿಗೆ ಅನುಸರಣೆ ಸಭೆಯ ಬೆಂಬಲ ಸೇವೆಯನ್ನು ನೀಡಿ ಅಭ್ಯರ್ಥಿಗಳನ್ನು ಸ್ವಾವಲಂಭಿಯಾಗಲು ಪ್ರೇರೆಪಿಸಲಾಗುವುದು. |
| (ಇ) ಜನಸಾಮಾನ್ಯರಿಂದ ಉನ್ನತ ಶೈಕ್ಷಣಿಕ ಅರ್ಹತೆಗಳನ್ನು ಪಡೆದವರಿಗೂ ಬಹುಪಯೋಗಿಯಾಗಿರುವ ಯೋಜನೆಯ ಅನುಷ್ಠಾನವನ್ನು ಸರ್ಕಾರ ಇನ್ನಷ್ಟು ಪರಿಣಾಮಕಾರಿಯಾಗಿರಿಸುವಲ್ಲಿ ಹಮ್ಮಿಕೊಂಡ ಕ್ರಿಯಾ ಯೋಜನೆಗಳೇನು? | **ಕೌಶಲ್ಯ ಮಿಷನ್**<br>ಜನಸಾಮಾನ್ಯರಿಂದ ಉನ್ನತ ಶೈಕ್ಷಣಿಕ ಅರ್ಹತೆಗಳನ್ನು ಪಡೆದವರಿಗೂ ಬಹುಪಯೋಗವಾಗುವ ಫ್ಯೂಚರ್ ಸ್ಕಿಲ್ ಕೌಶಲ್ಯಯುತ ತರಬೇತಿಯನ್ನು ನೀಡಲು ವಿಷಯ ಮತ್ತು ಪಠ್ಯಕ್ರಮವನ್ನು ಅಭಿವೃದ್ಧಿ ಪಡಿಸಿ ಜಾರಿಗೊಳಿಸಲು ಕ್ರಮವಹಿಸಲಾಗಿದೆ.<br><br>**ಡೇ–ನಲ್ಮ್**<br>ಡೇ–ನಲ್ಮ್ ಅಭಿಯಾನವು ಕೇಂದ್ರ ಪುರಸ್ಕೃತ ಯೋಜನೆಯಾಗಿದ್ದು, ನಗರದ ಬಡವರಿಗೆ ಕೇಂದ್ರ ಸರ್ಕಾರವು ಅಗಿಂದಾಗ್ಗೆ ಸೇರಿಸುವ ಜಾಬ್‌ರೋಲ್‌ಗಳಿಗೆ ತರಬೇತಿಯನ್ನು ನೀಡಲಾಗುತ್ತಿದೆ.<br><br>**ಸಿಡಾಕ್**<br>ಉನ್ನತ ಶಿಕ್ಷಣ ಪಡೆದ ಅಭ್ಯರ್ಥಿಗಳಿಗೆ ಹೆಚ್ಚಿನ ಮುತುವರ್ಜಿ ವಹಿಸಿ ಉದ್ಯಮಶೀಲತಾ ಕಾರ್ಯಕ್ರಮದಲ್ಲಿ ತರಬೇತಿ ನೀಡಿ ಸ್ವಯಂ ಉದ್ಯೋಗ ಹೊಂದಿ ಸ್ವಾವಲಂಭಿಯಾಗಲು ಸಾಲ ಪಡೆಯಲು ಸಹಾಯ ಹಸ್ತ ನೀಡಿ ಪ್ರೇರೇಪಿಸಲಾಗುವುದು. |

**ಸಂಖ್ಯೆ: ಕೌಉಜೀಇ 40 ಉಜೀಪ್ರ 2020**

**(ಡಾ॥ ಸಿ.ಎನ್. ಅಶ್ವಥ್ ನಾರಾಯಣ)**
**ಉಪ ಮುಖ್ಯಮಂತ್ರಿಗಳು ಮತ್ತು ಉನ್ನತ ಶಿಕ್ಷಣ,**
**ಐಟಿ/ಬಿಟಿ ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ**
**ಮತ್ತು ಜೀವನೋಪಾಯ ಸಚಿವರು**

# ಕರ್ನಾಟಕ ವಿಧಾನಸಭೆ

| | |
|---|---|
| ವಿಧಾನಸಭೆಯ ಸದಸ್ಯರ ಹೆಸರು: | ಶ್ರೀ ರಾಮದಾಸ್ ಎಸ್.ಎ (ಕೃಷ್ಣರಾಜ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | **1227** |
| ಉತ್ತರಿಸಬೇಕಾದ ದಿನಾಂಕ: | 24-09-2020 |
| ಉತ್ತರಿಸುವ ಸಚಿವರು: | ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕಳೆದ ಮೂರು ವರ್ಷಗಳಲ್ಲಿ ರಾಜ್ಯದಲ್ಲಿ ವೈದ್ಯಕೀಯ ಮತ್ತು ಅರೆ ವೈದ್ಯಕೀಯ ಶಿಕ್ಷಣವನ್ನು ಪಡೆದು ಹೊರ ಬಂದ ವೈದ್ಯರುಗಳು ಮತ್ತು ಅರೆ ವೈದ್ಯರುಗಳು ರಾಜ್ಯ ಸರ್ಕಾರದ ಕಡ್ಡಾಯ ಗ್ರಾಮೀಣ ಸೇವೆ ಕಾನೂನಿನ ಅಡಿಯಲ್ಲಿ ಎಷ್ಟು ಜನ ಎಲ್ಲೆಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ; (ವರ್ಷವಾರು ವಿವರ ನೀಡುವುದು) | ಕಳೆದ ಮೂರು ವರ್ಷಗಳಲ್ಲಿ ರಾಜ್ಯದಲ್ಲಿ ವೈದ್ಯಕೀಯ ಶಿಕ್ಷಣವನ್ನು ಪಡೆದು ಹೊರ ಬಂದ ವೈದ್ಯರುಗಳು ರಾಜ್ಯ ಸರ್ಕಾರದ ಕಡ್ಡಾಯ ಗ್ರಾಮೀಣ ಸೇವೆ ಸಲ್ಲಿಸಿರುತ್ತಿರುವ ವರ್ಷವಾರು ವಿವರ ಈ ಕೆಳಕಂಡಂತೆ ಇರುತ್ತದೆ.<br><br>ಕ್ರ.ಸಂ / ವರ್ಷ / ವೈದ್ಯರುಗಳ ಸಂಖ್ಯೆ<br>1 / 2018-19 / 68<br>2 / 2019-20 / 66<br>3 / 2020-21 / 06<br><br>ರಾಜ್ಯ ಸರ್ಕಾರದ ಕಡ್ಡಾಯ ಗ್ರಾಮೀಣ ಸೇವೆ ಸಲ್ಲಿಸಿರುತ್ತಿರುವ ವೈದ್ಯರು ಎಲ್ಲೆಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ ಎಂಬ ಮಾಹಿತಿಯನ್ನು ಅನುಬಂಧ-1ರಲ್ಲಿ ನೀಡಲಾಗಿದೆ. |
| ಆ | ಕಡ್ಡಾಯ ಗ್ರಾಮೀಣ ಸೇವೆಯಿಂದ ಗ್ರಾಮೀಣ ಪ್ರದೇಶದ ಜನರ ಆರೋಗ್ಯ ಸುಧಾರಣೆಯ ಬಗ್ಗೆ ವರದಿಗಳು ಬಂದಿದೆಯೇ; | ಕಡ್ಡಾಯ ಗ್ರಾಮೀಣ ಸೇವೆಯಿಂದ ಗ್ರಾಮೀಣ ಪ್ರದೇಶದ ಜನರ ಆರೋಗ್ಯ ಸುಧಾರಣೆ ಸಕಾಲಕ್ಕೆ ಚಿಕಿತ್ಸೆ ದೊರೆಯುತ್ತಿದೆ. ಆದರೆ ಈ ಬಗ್ಗೆ ಯಾರಿಂದಲೂ ವರದಿ ಬಂದಿರುವುದಿಲ್ಲ. |
| ಇ | ಕಡ್ಡಾಯ ಗ್ರಾಮೀಣ ಸೇವೆ ಮಾಡುತ್ತಿರುವ ವೈದ್ಯರುಗಳು ಮತ್ತು ಅರೆ ವೈದ್ಯರುಗಳಿಗೆ ಸರ್ಕಾರ ನೀಡುತ್ತಿರುವ ಸೌಲಭ್ಯಗಳಾವುವು; | ಕಡ್ಡಾಯ ಗ್ರಾಮೀಣ ಸೇವೆ ಮಾಡುತ್ತಿರುವ ವೈದ್ಯರುಗಳಿಗೆ ನೀಡುತ್ತಿರುವ ಸೌಲಭ್ಯಗಳು ಈ ಕೆಳಕಂಡಂತೆ ಇರುತ್ತದೆ.<br>• ಒಂದು ವರ್ಷದ ಕಡ್ಡಾಯ ಗ್ರಾಮೀಣ ಸೇವಾ ತರಬೇತಿಗೆ ಒಳಪಟ್ಟ ಪ್ರತಿಯೊಬ್ಬ ಅಭ್ಯರ್ಥಿಗೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳಲ್ಲಿ ಸಾಮಾನ್ಯ ಕರ್ತವ್ಯ ನಿರತ ವೈದ್ಯರ ಒಟ್ಟು ಕನಿಷ್ಠ ಸಂಬಳಕ್ಕಿಂತ 100 ರೂಪಾಯಿಗಳನ್ನು ಕಟಾಯಿಸಿ ವಿದ್ಯಾರ್ಥಿ ವೇತನವನ್ನು (ಸ್ಟೈಫಂಡ್) ಸಂದಾಯ ಮಾಡಲಾಗುತ್ತಿದೆ. (ವಿಶೇಷ ಭತ್ಯೆಯನ್ನು ಹೊರತುಪಡಿಸಿ).<br>• ಸರ್ಕಾರದ ಕರ್ತವ್ಯವನ್ನು ನಿರ್ವಹಿಸಲು ಪ್ರಯಾಣಿಸಿದಾಗ, ಕರ್ನಾಟಕ ನಾಗರೀಕ ಸೇವಾ ನಿಯಮ (ಕೆ.ಸಿ.ಎಸ್.ಆರ್)ಗಳನುಸಾರ ಪ್ರಯಾಣ ಭತ್ಯೆಗೆ ಅರ್ಹರಾಗುವರು. |

| | | |
|---|---|---|
| ಈ | All India Quota ಅಡಿಯಲ್ಲಿ ಶಿಕ್ಷಣವನ್ನು ಪಡೆದ ವೈದ್ಯರುಗಳಿಗೆ ಕಡ್ಡಾಯ ಗ್ರಾಮೀಣ ಸೇವೆ ಬಗ್ಗೆ ಕೈಗೊಂಡ ಕ್ರಮಗಳೇನು? | ಸರ್ಕಾರದ ಪತ್ರ ಸಂಖ್ಯೆ: ಆಕುಕ 102 ಆರ್‌ಜಿಯು 2012, ದಿನಾಂಕ:23.08.2013ರನ್ವಯ ಅಖಿಲ ಭಾರತ ಕೋಟಾದಡಿ ಪ್ರವೇಶ ಪಡೆಯುವ ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ಕಡ್ಡಾಯ ಗ್ರಾಮೀಣ ಸೇವೆಯು ಅನ್ವಯವಾಗುವುದಿಲ್ಲ. ಸದರಿ ಪತ್ರದ ಪ್ರತಿಯನ್ನು ಅನುಬಂಧ-2ರಲ್ಲಿ ಒದಗಿಸಲಾಗಿದೆ. |

**ಸಂಖ್ಯೆ:ಆಕುಕ 60 ಹೆಚ್ ಎಸ್ ಹೆಚ್ 2020**

**(ಬಿ. ಶ್ರೀರಾಮುಲು)**

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ**
**ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು**

1227

| ಸರ್ಕಾರಿ ಕೋಟಾದಡಿ ವೈದ್ಯಕೀಯ ಮಹಾವಿದ್ಯಾಲಯಗಳಲ್ಲಿ ಸೀಟು ಪಡೆದು ಸ್ವ-ಇಚ್ಛೆಯಿಂದ ಒಂದು ವರ್ಷ ಕಡ್ಡಾಯ ಗ್ರಾಮೀಣ ಸೇವೆ ಸಲ್ಲಿಸುತ್ತಿರುವ ಎಂಬಿಬಿಎಸ್ ವೈದ್ಯರುಗಳ ಪಟ್ಟಿ | | | |
|---|---|---|---|
| Sl.No | ಅಭ್ಯರ್ಥಿ ಹೆಸರು ಮತ್ತು ವಿಳಾಸ | ಸರ್ಕಾರಿ ವೈದ್ಯಕೀಯ ವಿದ್ಯಾಲಯ | ನೇಮಕಾತಿ ಮಾಡಲಾದ ಸ್ಥಳ |
| **2019-20** | | | |
| 1 | ಡಾ॥ ಸಚೀನ ಹಾರುಗೇರಿ | ಕೆ.ವಿ.ಜೆ ವೈದ್ಯಕೀಯ ಮಹಾವಿದ್ಯಾಲಯ & ಸಂಶೋಧನಾ ಸಂಸ್ಥೆ, ಸೂಳ್ಯ | ಪ್ರಾ.ಆ.ಕೇ ನೋಗಿನಾಳ ಹುಕ್ಕೇರಿ ತಾ॥ ಬೆಳಗಾವಿ ಜಿಲ್ಲೆ |
| 2 | ಡಾ॥ ಮಂಜನಾಥ ದಂಡಾವತಿ, | ಮಂಡ್ಯ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ ಮಂಡ್ಯ | ಪ್ರಾ.ಆ.ಕೇ ಚಿತ್ತರಗಿ, ಹುನಗುಂದ ತಾ॥ ಬಾಗಲಕೋಟೆ ಜಿಲ್ಲೆ |
| 3 | ಡಾ॥ ಕೌಶಲ್ಯ ಬಿ ಎ | ಕೆ.ವಿ.ಜೆ ವೈದ್ಯಕೀಯ ಮಹಾವಿದ್ಯಾಲಯ & ಸಂಶೋಧನಾ ಸಂಸ್ಥೆ, ಸೂಳ್ಯ | ಪ್ರಾ.ಆ.ಕೇ ಸಖರಾಯಪಟ್ಟಣ, ಕಡೂರು ತಾ॥ ಚಿಕ್ಕಮಗಳೂರು ಜಿಲ್ಲೆ |
| 4 | ಡಾ॥ ಚಂದನ್ ಎಸ್ ಎಸ್ | ಸುಬಯ್ಯ ವೈದ್ಯಕೀಯ ವಿದ್ಯಾಲಯ, ಶಿವಮೊಗ್ಗ | ಪ್ರಾ.ಆ.ಕೇ ಬೆಳವಾಡಿ ಅರಕಲಗೂಡು ತಾ॥ ಹಾಸನ ಜಿಲ್ಲೆ |
| 5 | ಡಾ॥ ಕಾರ್ತಿಕ್ ವೈ ಆರ್ | ಮಂಡ್ಯ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ ಮಂಡ್ಯ | ಪ್ರಾ.ಆ.ಕೇ ಗಾಮನಹಳ್ಳಿ ಶ್ರೀರಂಗಪಟ್ಟಣ ತಾ॥ ಮಂಡ್ಯ ಜಿಲ್ಲೆ |
| 6 | ಡಾ॥ ವೆಂಕಟೇಶ್ ನಾಯ್ಕ ಎನ್ ಆರ್ | ಎಸ್ ಎಸ್ ವೈದ್ಯಕೀಯ ಮಹಾವಿದ್ಯಾಲಯ ದಾವಣಗೆರೆ | ಪ್ರಾ.ಆ.ಕೇ ಕತ್ತಲಗೆರೆ ಚೆನ್ನಗಿರಿ ತಾ॥ ದಾವಣಗೆರ ಜಿಲ್ಲೆ |
| 7 | ಡಾ॥ ಅಮರೇಶ್ ನಾಗರಾಳ | ಕಿಮ್ಸ್ ಹುಬ್ಬಳ್ಳಿ | ಪ್ರಾ.ಆ.ಕೇ ದೇವರಗೋನಾಲ ಸುರಪುರ ತಾ॥ ಯಾದಗಿರಿ ಜಿಲ್ಲೆ |
| 8 | ಡಾ॥ ಶ್ರೀಕಾಂತ್ ಆರ್ ಒ | ಬಿಎಂಸಿ & ಆರ್ಐ ಬೆಂಗಳೂರು | ಪ್ರಾ.ಆ.ಕೇ ಜಿ ಎನ್ ಕೆರೆ ಹೊಸದುರ್ಗ ತಾ॥ ಚಿತ್ರದುರ್ಗ ಜಿಲ್ಲೆ |
| 9 | ಡಾ॥ ಮುಹಮ್ಮದ ಯೂನೂಸ್ ಶರೀಫ್ | ಎಂಎಂಸಿ ಮೈಸೂರು | ಪ್ರಾ.ಆ.ಕೇ ನಾರಾಯಣಪುರ, ಪಾಂಡವಪುರ ತಾ॥ ಮಂಡ್ಯ ಜಿಲ್ಲೆ |
| 10 | ಡಾ॥ ಪ್ರೀತಿ ಕೆ ಆರ್ | ಎಸ್ ಎಸ್ ವೈದ್ಯಕೀಯ ಮಹಾವಿದ್ಯಾಲಯ ದಾವಣಗೆರೆ | ಪ್ರಾ.ಆ.ಕೇ ಹಲಗೇರಿ, ರಾಣಿಬೆನ್ನೂರು ತಾ॥ ಹಾವೇರಿ ಜಿಲ್ಲೆ ಸ್ಥಳ ಬದಲಾವಣೆ ಪ್ರಾ.ಆ.ಕೇ ಬೇತೂರು, ದಾವಣಗೆರೆ ತಾ॥ ಮತ್ತು ಜಿಲ್ಲೆ |
| 11 | ಡಾ॥ ಜೈಕಿಶನ್ ಎನ್ | ಬೀದರ್ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ ಬೀದರ್ | ಪ್ರಾ.ಆ.ಕೇ ಕುದೂರು, ಮಾಗಡಿ ತಾ॥ ರಾಮನಗರ ಜಿಲ್ಲೆ |
| 12 | ಡಾ॥ ಚಂದನ್ ಕೆ ಎನ್ | ಜೆಜೆಎಂ ಮೆಡಿಕಲ್ ಕಾಲೇಜು ದಾವಣಗೆರೆ | ಪ್ರಾ.ಆ.ಕೇ ಹೊಳಸಿರಿಗೇರಿ, ಹರಿಹರ ತಾ॥ ದಾವಣಗೆರೆ ಜಿಲ್ಲೆ |
| 13 | ಡಾ॥ ಚಂದ್ರಶೇಖರ್ ಜೆ | ರಾಜರಾಜೇಶ್ವರಿ ಮೆಡಿಕಲ್ ಕಾಲೇಜು ಮತ್ತು ಆಸ್ಪತ್ರೆ ಬೆಂಗಳುರು | ಪ್ರಾ.ಆ.ಕೇ ಹೆಬ್ಬಲಗುಪ್ಪೆ, ಹೆಚ್.ಡಿ.ಕೋಟೆ ತಾ॥ ಮೈಸೂರು ಜಿಲ್ಲೆ |
| 14 | ಡಾ॥ ಪುಷ್ಪಾ ಬಿ ಕಲ್ಲೂರಕರ | ಬೀದರ್ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ ಬೀದರ್ | ಪ್ರಾ.ಆ.ಕೇ ದೇಸಾಯಿ ಕಲ್ಲೂರ ಅಫಜಲಪೂರ ತಾ॥ ಗುಲ್ಬರ್ಗಾ ಜಿಲ್ಲೆ |
| 15 | ಡಾ॥ ರಾಜೇಶ್ ಜಿ | ಹಾಸನ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ ಹಾಸನ | ಪ್ರಾ.ಆ.ಕೇ ಕಾರ್ಲೆ ಹಾಸನ ತಾ॥ & ಜಿಲ್ಲೆ |
| 16 | ಡಾ॥ ರಕ್ಷಿತ್ ಕೆ ವಿ | ಬಿಎಂಸಿ & ಆರ್ಐ ಬೆಂಗಳೂರು | ಪ್ರಾ.ಆ.ಕೇ ಕ್ಯಾತುಂಗೆರೆ ಮಂಡ್ಯ ತಾ॥ & ಜಿಲ್ಲೆ ಸ್ಥಳ ನೇಮಕಾತಿ ಕೆರಗೋಡು, ಮಂಡ್ಯ ತಾ॥ ಮತ್ತು ಜಿಲ್ಲೆ |
| 17 | ಡಾ॥ ಆಇಸಾ ಖಾನುಂ ಮುಕಾಷಿ | ಕೆಎಲ್ಇ ಜವಾಹರ್‌ಲಾಲ್ ನೆಹರು ಮೆಡಿಕಲ್ ಕಾಲೇಜು ಬೆಳಗಾಂ | ಪ್ರಾ.ಆ.ಕೇ ಅದರಗುಂಚಿ, ಹುಬ್ಬಳ್ಳಿ ತಾ॥ ಧಾರವಾಡ ಜಿಲ್ಲೆ |
| 18 | ಡಾ॥ ಸಿದ್ದಣ್ಣ | ಕಿಮ್ಸ್ ಹುಬ್ಬಳ್ಳಿ | ಪ್ರಾ.ಆ.ಕೇ ಸಜ್ಜಲಗುಡ್ಡ ಲಿಂಗಸೂರು ತಾ॥ ರಾಯಚೂರು ಜಿಲ್ಲೆ |

ಅನುಬಂಧ -

ರಾಜ್ಯದ ಅರಣ್ಯ ಪ್ರದೇಶದಲ್ಲಿ ಗಣಿಗಾರಿಕೆ ನಡೆಸಲು ಅನುಮತಿಸಲಾಗಿರುವ ಪಟ್ಟಿ-

ಬಳ್ಳಾರಿ ವಿಭಾಗ

| ಕ್ರ. ಸಂ | ಗುತ್ತಿಗೆದಾರರ ಹೆಸರು | ಗಣಿ ಗುತ್ತಿಗೆ ಸಂಖ್ಯೆ | ಅರಣ್ಯ ಪ್ರದೇಶದ ಸ್ಥಳ | ವಿಸ್ತೀರ್ಣ (ಹೆಕ್ಟೇರ್‌ಗಳಲ್ಲಿ) |
|---|---|---|---|---|
| 1 | Zeenath Transport Co., Bellary | 2547 | R.M.Block | 50.00 |
| 2 | Mysore Minerals Ltd., Bangalore | 2605 | N.E.Block | 136.97 |
| 3 | SMIORE | 2580 | S.M.Block | 1615.64 |
| 4 | SMIORE | 2581 | S.M.Block | 142.58 |
| 5 | Veerabhdrappa Sangappa & Co | 2296 | R.M.Block | 51.00 |
| 6 | Nadeem Minerals | 2526 | D.M. Block | 53.20 |
| 7 | MSPL | 2416 | Hospet RF (Jambunathanahalli) | 347.22 |
| 8 | P.Balasubbasetty & sons. | 2502 | N.E.Block | 44.11 |
| 9 | M. Hanumantharao | 2505 | D.M. Block | 40.47 |
| 10 | B.Kumaragowda | 2516 | S.M.Block | 54.25 |
| 11 | Ramghad mines & minerals ltd. | 2593 | R.M.Block | 20.23 |
| 12 | Shree Gavisiddeswara minerals (M. Srinivasulu) | 2552 | D.M. Block | 134.00 |
| 13 | NMDC | 1111 | S.M.Block | 341.20 |
| 14 | Chowgale & Co | 2546 | N.E.Block | 100.00 |
| 15 | Lakshmi Minerals | 2551 | R.M.Block | 24.51 |
| 16 | H.N.Premkumar | 2538 | Hospet RF (Kallahalli) | 21.97 |
| 17 | VNK Menon | 2543 | R.M.Block | 10.00 |
| 18 | G.G.Brothers | 2586 | Joga RF (Kwategudda) | 15.10 |
| 19 | H.G.Rangangouda | 2549 | N.E.Block | 36.5 |
| 20 | Srikumaraswamy Minera Exports | 2141 | R.Mblock | 60.56 |
| 21 | M/s. S.A.Tawab & Company | 2488 | R.Mblock | 24.72 |
| 22 | M/s. Mysore Mineals Limited | 2629 | S.M.Block | 80.06 |
| 23 | M/s. JSW Steel Limited (Tunga Iron ore mines) | 0004 | D.M.Block | 32.68 |
| 24 | M/s. JSW Steel Limited (Nandi Iron ore mines) | 0005 | S.M.Block | 21.03 |
| 25 | M/s. JSW Steel Limited | 0006 | S.M.Block | 105.58 |

| | | | | |
|---|---|---|---|---|
| | (Devadhari Iron ore mines) | | | |
| 26 | M/s. JSW Steel Limited (Bhadra Iron ore mines) | 0007 | D.M.Block | 133.58 |
| 27 | M/s. JSW Steel Limited (Ubbalagandi Iron ore mines) | 009 | D.M.Block Ubbalagandi RF | 32.59 |
| 28 | M/s. JSW Steel Limited (Rama Iron ore mines) | 008 | R.M.Block | 32.56 |
| 29 | M/s. MSPL, Hospet (Karadikolla Iron ore mines) | 0010 | N.E.Block | 86.059 |
| | | | ಒಟ್ಟು | 3348.369 |

ಚಿತ್ರದುರ್ಗ ವಿಭಾಗ

| ಕ್ರ. ಸಂ | ಗುತ್ತಿಗೆದಾರರ ಹೆಸರು | ಗಣಿ ಗುತ್ತಿಗೆ ಸಂಖ್ಯೆ | ಅರಣ್ಯ ಪ್ರದೇಶದ ಸ್ಥಳ | ವಿಸ್ತೀರ್ಣ (ಹೆಕ್ಟೇರ್‌ಗಳಲ್ಲಿ) |
|---|---|---|---|---|
| 1 | M/s Vedanta Ltd., (ಈ ಹಿಂದಿನ Sesa Goa Ltd./ Sesa Sterlite Ltd.) | 2677 | Nirthadi RF | 164.79 |
| 2 | Sri R. Praveenchandra (Sri E. Ramamurthy) | 2294 | Nirthadi RF | 42.13 |
| | | | ಒಟ್ಟು | 206.92 |

ದಾವಣಗೆರೆ ವಿಭಾಗ

| ಕ್ರ. ಸಂ | ಗುತ್ತಿಗೆದಾರರ ಹೆಸರು | ಗಣಿ ಗುತ್ತಿಗೆ ಸಂಖ್ಯೆ | ಅರಣ್ಯ ಪ್ರದೇಶದ ಸ್ಥಳ | ವಿಸ್ತೀರ್ಣ (ಹೆಕ್ಟೇರ್‌ಗಳಲ್ಲಿ) |
|---|---|---|---|---|
| 1 | M/s Yerifata Mining Company | 1783/1616 | Kadati SF | 14.80 |
| 2 | M/s Bahadurgatta Mines* | 1584 | Bevinahalli SF | 20.23 |
| | ಒಟ್ಟು | | | 35.03 |

*ಷರಾ: ಸದರಿ ಗಣಿಗುತ್ತಿಗೆಯ ಅವಧಿಯು ಚಾಲ್ತಿಯಲ್ಲಿ ಇದ್ದರೂ ಗಣಿಗಾರಿಕೆ ಚಟುವಟಿಕೆಗಳು ನಡೆಯುತ್ತಿರುವುದಿಲ್ಲ.

ಬಾಗಲಕೋಟೆ ವಿಭಾಗ

| ಕ್ರ. ಸಂ | ಗುತ್ತಿಗೆದಾರರ ಹೆಸರು | ಗಣಿ ಗುತ್ತಿಗೆ ಸಂಖ್ಯೆ | ಅರಣ್ಯ ಪ್ರದೇಶದ ಸ್ಥಳ | ವಿಸ್ತೀರ್ಣ (ಹೆಕ್ಟೇರ್‌ಗಳಲ್ಲಿ) |
|---|---|---|---|---|
| 1 | M/s Doddanavar Brothers | 2649 | Heremagi, Sulibhavi,Aihole | 30.33 |

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1299

ಮಾನ್ಯ ಸದಸ್ಯರ ಹೆಸರು : ಶ್ರೀ ಮಹೇಶ್ ಸಾ.ರಾ (ಕೃಷ್ಣರಾಜನಗರ)

ಉತ್ತರಿಸುವ ದಿನಾಂಕ: : **24.09.2020**

ಉತ್ತರಿಸುವ ಸಚಿವರು : ಉಪ ಮುಖ್ಯಮಂತ್ರಿಗಳು (ಉನ್ನತ ಶಿಕ್ಷಣ, ಐಟಿ & ಬಿಟಿ, ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಹಾಗೂ ಜೀವನೋಪಾಯ ಇಲಾಖೆ)

| | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿರುವ ಸರ್ಕಾರಿ ಇಂಜಿನಿಯರಿಂಗ್ ಕಾಲೇಜುಗಳಲ್ಲಿ ಎ.ಐ.ಸಿ.ಟಿ.ಇ ನಿಯಮಾನುಸಾರ ಸೃಜಿಸಬೇಕಾಗಿರುವ ಬೋಧಕ/ ಬೋಧಕೇತರ ಹುದ್ದೆಗಳು ಹಲವಾರು ವರ್ಷಗಳಿಂದ ಖಾಲಿಯಿರುವುದರಿಂದ ವಿದ್ಯಾರ್ಥಿಗಳ ತಾಂತ್ರಿಕ ವ್ಯಾಸಂಗಕ್ಕೆ ತೊಂದರೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ತಾಂತ್ರಿಕ ಶಿಕ್ಷಣ ಇಲಾಖೆಯ ಅಧೀನದಲ್ಲಿ ಪ್ರಸ್ತುತ 14 ಸರ್ಕಾರಿ ಇಂಜಿನಿಯರಿಂಗ್ ಸಂಸ್ಥೆಗಳು ಕಾರ್ಯನಿರ್ವಹಿಸುತ್ತಿದ್ದು, ಸದರಿ ಸಂಸ್ಥೆಗಳಿಗೆ ಮಂಜೂರಾದ ಭರ್ತಿಯಾದ ಖಾಲಿಯಿರುವ ಹುದ್ದೆಗಳ ವಿವರಗಳು ಈ ಕೆಳಕಂಡಂತಿವೆ. (ಕೋಷ್ಟಕಗಳು ಕೆಳಗೆ) |
| ಆ) | ಹಾಗಿದ್ದಲ್ಲಿ, ಹಲವಾರು ವರ್ಷಗಳಿಂದ ಖಾಲಿ ಇರುವ ಬೋಧಕ/ ಬೋಧಕೇತರ ಹುದ್ದೆಗಳನ್ನು ಭರ್ತಿ ಮಾಡಲು ಅಗತ್ಯವಾಗಿ ವೃಂದ ಮತ್ತು | ಖಾಲಿ ಇರುವ ಬೋಧಕ ಹುದ್ದೆಗೆದುರಾಗಿ ವಿದ್ಯಾರ್ಥಿಗಳ ಶೈಕ್ಷಣಿಕ ಹಿತದೃಷ್ಟಿಯಿಂದ ಪ್ರಸ್ತುತ 268 ಅರೆಕಾಲಿಕ ಅತಿಥಿ ಉಪನ್ಯಾಸಕರನ್ನು ನೇಮಕ ಮಾಡಿಕೊಂಡು ಪಾಠ ಪ್ರವಚನ ನಡೆಸಲಾಗುತ್ತಿದೆ ಮತ್ತು ಸಂಸ್ಥೆಗಳ ಆಡಳಿತಾತ್ಮಕ ಹಿತದೃಷ್ಟಿಯಿಂದ ಖಾಲಿ ಇರುವ ಗ್ರೂಪ್-ಡಿ ಹುದ್ದೆಗಳ ಎದುರಾಗಿ 210 ಅರೆಕಾಲಿಕ ಅಕುಶಲದಾಳುಗಳನ್ನು ನೇಮಿಸಿಕೊಂಡು ಕೆಲಸ ಕಾರ್ಯಗಳನ್ನು ನಿರ್ವಹಿಸಲಾಗುತ್ತಿದೆ. |

**ಇಂಜಿನಿಯರಿಂಗ್ ಕಾಲೇಜುಗಳು (ಬೋಧಕ)**

| ಕ್ರಸಂ | ಹುದ್ದೆಯ ವರ್ಗ | ಮಂಜೂರಾದ ಹುದ್ದೆಗಳ ಸಂಖ್ಯೆ | ಭರ್ತಿಯಾದ ಹುದ್ದೆಗಳ ಸಂಖ್ಯೆ | ಖಾಲಿಯಾದ ಹುದ್ದೆಗಳ ಸಂಖ್ಯೆ |
|---|---|---|---|---|
| 1 | ಎ | 229 | 112 | 117 |
| 2 | ಬಿ | 417 | 235 | 182 |
| | ಒಟ್ಟು | **646** | **347** | **299** |

**ಇಂಜಿನಿಯರಿಂಗ್ ಕಾಲೇಜುಗಳು (ಬೋಧಕೇತರ)**

| ಕ್ರಸಂ | ಹುದ್ದೆಯ ವರ್ಗ | ಮಂಜೂರಾದ ಹುದ್ದೆಗಳ ಸಂಖ್ಯೆ | ಭರ್ತಿಯಾದ ಹುದ್ದೆಗಳ ಸಂಖ್ಯೆ | ಖಾಲಿಯಾದ ಹುದ್ದೆಗಳ ಸಂಖ್ಯೆ |
|---|---|---|---|---|
| 1 | ಎ | 10 | 1 | 9 |
| 2 | ಬಿ | 21 | 16 | 5 |
| 3 | ಸಿ | 680 | 113 | 567 |
| 4 | ಡಿ | 439 | 12 | 427 |
| | ಒಟ್ಟು | **1150** | **142** | **1008** |

| | | |
|---|---|---|
| | ನೇಮಕಾತಿ ನಿಯಮಗಳನ್ನು ಮಾರ್ಪಡಿಸುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಯಾವ ಕಾಲಮಿತಿಯೊಳಗೆ ವೃಂದ ಮತ್ತು ನೇಮಕಾತಿ ನಿಯಮಗಳನ್ನು ರೂಪಿಸಲು/ ಮಾರ್ಪಡಿಸಿ ಖಾಲಿ ಇರುವ ಬೋಧಕ/ ಬೋಧಕೇತರ ಹುದ್ದೆಗಳನ್ನು ಭರ್ತಿ ಮಾಡಲಾಗವುದು? | ಸರ್ಕಾರಿ ಇಂಜಿನಿಯರಿಂಗ್ ಸಂಸ್ಥೆಗಳಲ್ಲಿನ ಬೋಧಕ ಸಿಬ್ಬಂದಿಗಳನ್ನು ಎ.ಐ.ಸಿ.ಟಿ.ಇ ನಿಯಮಗಳನ್ವಯ ಭರ್ತಿಮಾಡಬೇಕಾಗಿದ್ದು, ಮಾರ್ಚ್ 2019 ರಂದು 07ನೇ ಎ.ಐ.ಸಿ.ಟಿ.ಇ ನಿಯಮಗಳನ್ನು ಜಾರಿಗೆ ಬಂದಿದ್ದು, ಇದರನ್ವಯ ನೇಮಕಾತಿ ವಿಧಾನ, ವಿದ್ಯಾರ್ಹತೆ ಮತ್ತು ಸೇವಾ ಷರತ್ತುಗಳನ್ನು ವೃಂದ ಮತ್ತು ನೇಮಕಾತಿ ನಿಯಮಾವಳಿಗಳಲ್ಲಿ ಅಳವಡಿಸಿಕೊಂಡ ನಂತರ ಸದರಿ ಹುದ್ದೆಗಳನ್ನು ಭರ್ತಿ ಮಾಡಬೇಕಾಗಿರುತ್ತದೆ. ತಾಂತ್ರಿಕ ಶಿಕ್ಷಣ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ಮಾಡುವ ಪ್ರಕ್ರಿಯೆಯು ಚಾಲ್ತಿಯಲ್ಲಿದ್ದು, ವೃಂದ ಮತ್ತು ನೇಮಕಾತಿ ನಿಯಮಗಳು ಪರಿಷ್ಕರಣೆಯಾಗಿ ಜಾರಿಗೆ ಬಂದ ನಂತರ ಖಾಲಿಯಿರುವ ಬೋಧಕ ಹುದ್ದೆಗಳನ್ನು ಭರ್ತಿ ಮಾಡಲು ಕ್ರಮ ಜರುಗಿಸಲಾಗುವುದು.<br><br>ಸರ್ಕಾರಿ ಇಂಜಿನಿಯರಿಂಗ್ ಸಂಸ್ಥೆಗಳಲ್ಲಿ ಖಾಲಿ ಇರುವ ಬೋಧಕೇತರ ಸಿಬ್ಬಂದಿಗಳನ್ನು ಭರ್ತಿಮಾಡಲು ಈ ಕೆಳಕಂಡಂತೆ ಕ್ರಮ ವಹಿಸಲಾಗಿರುತ್ತದೆ. |

| **ಹುದ್ದೆಗಳ ಪದನಾಮ** | **ಕರ್ನಾಟಕ ಲೋಕಸೇವಾ ಆಯೋಗದ ಮತ್ತು ಕರ್ನಾಟಕ ಪರೀಕ್ಷಾ ಪ್ರಾಧಿಕಾರದ ವತಿಯಿಂದ ಭರ್ತಿಮಾಡಲು ಕ್ರಮವಹಿಸಿರುವ ಹುದ್ದೆಗಳ ಸಂಖ್ಯಾ ವಿವರದ ಮಾಹಿತಿ.** | **ಪ್ರಸ್ತುತ ಹಂತ** |
|---|---|---|
| ಬೆರಳಚ್ಚುಗಾರರು | 16 ಹುದ್ದೆಗಳನ್ನು ಭರ್ತಿ ಮಾಡಲು ತಾಂತ್ರಿಕ ಶಿಕ್ಷಣ ಇಲಾಖೆಯ ಪತ್ರ ದಿನಾಂಕ: 17.02.2016ರಲ್ಲಿ ಕರ್ನಾಟಕ ಲೋಕ ಸೇವಾ ಆಯೋಗಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿರುತ್ತದೆ. | ಕೆ.ಪಿ.ಎಸ್.ಸಿ ಯಿಂದ 15 ಅರ್ಹ ಅಭ್ಯರ್ಥಿಗಳ ಆಯ್ಕೆಪಟ್ಟಿ ಬಂದಿದ್ದು, ನೇಮಕಾತಿ ಆದೇಶ ನೀಡುವ ಬಗ್ಗೆ ಪರಿಶೀಲನೆಯಲ್ಲಿದೆ. |
| ಶಿಕ್ಷಕರು | 37 ಹುದ್ದೆಗಳನ್ನು ಭರ್ತಿ ಮಾಡಲು ತಾಂತ್ರಿಕ ಶಿಕ್ಷಣ ಇಲಾಖೆಯ ಪತ್ರ ದಿನಾಂಕ: 17.02.2016ರಲ್ಲಿ ಕರ್ನಾಟಕ ಲೋಕ ಸೇವಾ ಆಯೋಗಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿರುತ್ತದೆ. | ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ: ಆರ್(2)763/2020-21/ಪಿಎಸ್ ಸಿ, ದಿ:15.06.2020 ರಲ್ಲಿ ಸ್ಪಷ್ಟ ಮಾಹಿತಿ/ ದಾಖಲೆಗಳೊಂದಿಗೆ ಪರಿಷ್ಕೃತ ಪ್ರಸ್ತಾವನೆಯನ್ನು ಸಲ್ಲಿಸುವಂತೆ ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ ಇವರನ್ನು ಕೋರಿದ್ದು, ಅದರಂತೆ ಮಾಹಿತಿ ಒದಗಿಸಲು ಕ್ರಮ ವಹಿಸುತ್ತಿದ್ದಾರೆ. |
| ಮೆಕ್ಯಾನಿಕ್ | 70 ಹುದ್ದೆಗಳನ್ನು ಭರ್ತಿ ಮಾಡಲು ತಾಂತ್ರಿಕ ಶಿಕ್ಷಣ ಇಲಾಖೆಯ ಪತ್ರ ದಿನಾಂಕ: 29.02.2016 & 10.06.2016ರಲ್ಲಿ ಕರ್ನಾಟಕ ಲೋಕ ಸೇವಾ ಆಯೋಗಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿರುತ್ತದೆ. | |

1299

| | |
|---|---|
| ಕಾರ್ಯಗಾರ ಸಹಾಯಕರು | ತಾಂತ್ರಿಕ ಶಿಕ್ಷಣ ಇಲಾಖೆಯ ಪತ್ರ ದಿನಾಂಕ: 21.11.2016ರಲ್ಲಿ 231 ಹುದ್ದೆಗಳನ್ನು ಕರ್ನಾಟಕ ಪರೀಕ್ಷಾ ಪ್ರಾಧಿಕಾರದ ಮೂಲಕ ಭರ್ತಿ ಮಾಡಲು ಪ್ರಸ್ತಾವನೆಯನ್ನು ಸಲ್ಲಿಸಲಾಗಿರುತ್ತದೆ. ಸರ್ಕಾರಿ ಇಂಜಿನಿಯರಿಂಗ್ ಕಾಲೇಜುಗಳಲ್ಲಿ ಖಾಲಿಯಿರುವ ಕಾರ್ಯಗಾರ ಸಹಾಯಕರ ಹುದ್ದೆಗಳಿಗೆದುರಾಗಿ 210 ಅರೆಕಾಲಿಕ ಅಕುಶಲದಾಳುಗಳ ಸೇವೆಯನ್ನು ಹೊರಗುತ್ತಿಗೆ ಮೂಲಕ ಪಡೆಯಲಾಗುತ್ತಿರುತ್ತದೆ. |
| ಒಟ್ಟು | 354 |

| ಹುದ್ದೆಗಳ ಪದನಾಮ | | ಆರ್ಥಿಕ ಮಿತವ್ಯಯ ಜಾರಿಯಲ್ಲಿರುವ ಪ್ರಯುಕ್ತ ಆರ್ಥಿಕ ಸಹಮತಿಗಾಗಿ ಸಲ್ಲಿಸಲಾದ ಹುದ್ದೆಗಳ ಸಂಖ್ಯಾ ವಿವರದ ಮಾಹಿತಿ. |
|---|---|---|
| ಪ್ರ.ದ.ಸ | 165 | ತಾಂತ್ರಿಕ ಶಿಕ್ಷಣ ಇಲಾಖೆಯ ಪತ್ರ ದಿನಾಂಕ:03.06.2019ರಲ್ಲಿ 165 ಪ್ರಥಮ ದರ್ಜೆ ಸಹಾಯಕರ ಮತ್ತು 65 ದ್ವಿತೀಯ ದರ್ಜೆ ಸಹಾಯಕ ಹುದ್ದೆಗಳನ್ನು ಭರ್ತಿ ಮಾಡಲು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದ್ದು, ಆರ್ಥಿಕ ಇಲಾಖೆಯು ನೀಡಿರುವ ಅಭಿಪ್ರಾಯದನ್ವಯ ದಿನಾಂಕ:20.05.2020ರ ಸರ್ಕಾರದ ಪತ್ರದಲ್ಲಿ ತಾಂತ್ರಿಕ ಶಿಕ್ಷಣ ಇಲಾಖೆಗೆ ಮಂಜೂರಾಗಿರುವ ಪ್ರಥಮ ದರ್ಜೆ ಸಹಾಯಕ ಮತ್ತು ದ್ವಿತೀಯ ದರ್ಜೆ ಸಹಾಯಕ ಹುದ್ದೆಗಳನ್ನು ಸಮಗ್ರವಾಗಿ ಪರಾಮರ್ಶಿ ಕಾರ್ಯದೊತ್ತಡ ಅಧಿಕವಾಗಿರುವ ಕಛೇರಿಗಳಿಗೆ ಹುದ್ದೆಗಳನ್ನು ಹಂಚಿಕೆ ಮಾಡಿ, ಹೆಚ್ಚುವರಿ ಹುದ್ದೆಗಳನ್ನು ರದ್ದು ಮಾಡುವಂತೆ ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ ರವರಿಗೆ ತಿಳಿಸಲಾಗಿದೆ. |
| ದ್ವಿ.ದ.ಸ | 65 | |
| ಶಿಕ್ಷಕರು | 94 | ತಾಂತ್ರಿಕ ಶಿಕ್ಷಣ ಇಲಾಖೆಯ ಪತ್ರ ದಿನಾಂಕ:11.01.2017ರಲ್ಲಿ ಒಟ್ಟು 898 ಕಾರ್ಯಗಾರ ವಿಭಾಗದ (ಶಿಕ್ಷಕರು, ಮೆಕ್ಯಾನಿಕ್, ಕಾರ್ಯಗಾರ ಸಹಾಯಕರು) ಹುದ್ದೆಗಳನ್ನು ಭರ್ತಿ ಮಾಡಲು ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿದ್ದು, ಆರ್ಥಿಕ ಇಲಾಖೆಯು ನೀಡಿರುವ ಅಭಿಪ್ರಾಯದನ್ವಯ ದಿನಾಂಕ:18.09.2019ರ ಸರ್ಕಾರದ ಪತ್ರದಲ್ಲಿ ನೂತನವಾಗಿ ಪ್ರಾರಂಭವಾದ ಸರ್ಕಾರಿ ಪಾಲಿಟೆಕ್ನಿಕ್ ಮತ್ತು ಇಂಜಿನಿಯರಿಂಗ್ ಸಂಸ್ಥೆಗಳಲ್ಲಿ ಶಿಕ್ಷಕರು, ಮೆಕ್ಯಾನಿಕ್, ಕಾರ್ಯಗಾರ ಸಹಾಯಕರ ಹುದ್ದೆಗಳನ್ನು ಭರ್ತಿ ಮಾಡುವ ಸಂಬಂಧ AICTE Revised Norms ರನ್ವಯ ಪರಿಶೀಲಿಸಿ, ಈ ಹಿಂದೆ Norms ಬದಲಾವಣೆಗೆ ಮುನ್ನ ಇದ್ದ |
| ಮೆಕ್ಯಾನಿಕ್ | 166 | |
| ಕಾರ್ಯಗಾರ ಸಹಾಯಕರು | 638 | |

| | | | | |
|---|---|---|---|---|
| | | | | ಸಿಬ್ಬಂದಿ ಮಾದರಿಯನ್ನು ಪರಿಷ್ಕರಿಸಿ, ಅದರಂತೆ ಗುರುತಿಸಿರುವ ಹೆಚ್ಚುವರಿ ಸಿಬ್ಬಂದಿ ಮಾಹಿತಿಯನ್ನು ನೀಡುವಂತೆ ಹಾಗೂ Re-distribution/Re-deployment ಮಾಡಿದ ನಂತರ ಅವಶ್ಯವಿರುವ ಸಿಬ್ಬಂದಿಗೆ ಮಾತ್ರ ಪುನರ್ ಪರಿಶೀಲಿಸಿ ಮರುಪ್ರಸ್ತಾವನೆ ಸಲ್ಲಿಸುವಂತೆ ಹಾಗೂ ಅಲ್ಲಿಯವರೆಗೆ ಯಾವುದೇ ನೇಮಕಾತಿ ಪ್ರಕ್ರಿಯೆಯನ್ನು ಮಾಡದೇ, ಮಾಡಿದ್ದಲ್ಲಿ ಸ್ಥಗಿತಗೊಳಿಸುವಂತೆ ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ ರವರಿಗೆ ತಿಳಿಸಲಾಗಿದೆ. |
| | | ಒಟ್ಟು | **1128** | |

**ಇಡಿ 104 ಟಿಪಿಇ 2020**

(ಡಾ: ಅಶ್ವಥ್ ನಾರಾಯಣ ಸಿ.ಎನ್)
ಉಪಮುಖ್ಯಮಂತ್ರಿಗಳು
(ಉನ್ನತ ಶಿಕ್ಷಣ, ಐಟಿ & ಬಿಟಿ, ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಹಾಗೂ ಜೀವನೋಪಾಯ ಇಲಾಖೆ)

ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1301
2. ಸದಸ್ಯರ ಹೆಸರು : ಶ್ರೀ ಮಹೇಶ್.ಸಾ.ರಾ.
3. ಉತ್ತರಿಸಬೇಕಾದ ದಿನಾಂಕ : 24.09.2020
4. ಉತ್ತರಿಸುವ ಸಚಿವರು : ಕಾರ್ಮಿಕ ಮತ್ತು ಸಕ್ಕರೆ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಮೈಶುಗರ್ ಸಕ್ಕರೆ ಕಾರ್ಖಾನೆ ಮಂಡ್ಯ, ಪಾಂಡವಪುರ ತಾಲ್ಲೂಕಿನ ಪಾಂಡವಪುರ ಸಕ್ಕರೆ ಕಾರ್ಖಾನೆ ಹಾಗೂ ಕೆ.ಆರ್. ನಗರ ತಾಲ್ಲೂಕಿನ ಚುಂಚನಕಟ್ಟೆ ಗ್ರಾಮದಲ್ಲಿ ಶ್ರೀರಾಮ ಸಕ್ಕರೆ ಕಾರ್ಖಾನೆಗಳಿಗೆ ಚಾಲನೆ ನೀಡಲು ಕ್ರಮ ಕೈಗೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ಕೈಗೊಂಡ ಕ್ರಮದ ಸಂಪೂರ್ಣ ಮಾಹಿತಿ ನೀಡುವುದು) | **ಮೈಸೂರು ಸಕ್ಕರೆ ಕಾರ್ಖಾನೆ:** ಮೈಸೂರು ಸಕ್ಕರೆ ಕಂಪನಿಯು ರಾಜ್ಯ ಸರ್ಕಾರದ ಸಾರ್ವಜನಿಕ ಉದ್ದಿಮೆಯಾಗಿರುತ್ತದೆ. ಮೈಸೂರು ಸಕ್ಕರೆ ಕಾರ್ಖಾನೆಯು 2015-16, 2016-17 ಹಾಗೂ 2019-20 ನೇ ಸಾಲಿನಲ್ಲಿ ದುಡಿಯುವ ಬಂಡವಾಳದ (Working Capital) ಕೊರತೆಯಿಂದಾಗಿ ಕಬ್ಬು ಅರೆಯುವ ಕಾರ್ಯವನ್ನು ಸ್ಥಗಿತಗೊಳಿಸಿರುತ್ತದೆ. ಸರ್ಕಾರದ ಆದೇಶ ಸಂಖ್ಯೆ ವಾಕೈ 05 ಸಸಕಾ 2020 ದಿನಾಂಕ 09.03.2020 ರಲ್ಲಿ ಈ ಕಾರ್ಖಾನೆಯನ್ನು ಪುನಶ್ಚೇತನಗೊಳಿಸುವ ಸಂಬಂಧ 2020-21ನೇ ಹಂಗಾಮಿನಿಂದ 40 ವರ್ಷಗಳ ಅವಧಿಗೆ LROT (Lease Rehabilitate Operate Transfer) ಆಧಾರದ ಮೇಲೆ ಇದ್ದಲ್ಲಿ ಇದ್ದಂತೆಯೇ (As is where is Basis) ಖಾಸಗಿಯವರಿಗೆ ಗುತ್ತಿಗೆ ನೀಡಲು ಸರ್ಕಾರದ ಅನುಮತಿ ನೀಡಿ ಆದೇಶಿಸಿದ್ದು, ಇದಕ್ಕೆ ಸಚಿವ ಸಂಪುಟದ ದಿನಾಂಕ 27.03.2020 ರ ಸಭೆಯ ಕಾರ್ಯಸೂಚಿಯ ಕ್ರಮ ಸಂಖ್ಯೆ 03 ರಲ್ಲಿ ಘಟನೋತ್ತರ ಅನುಮೋದನೆಯನ್ನು ಪಡೆಯಲಾಗಿತ್ತು ಹಾಗೂ ಸಚಿವ ಸಂಪುಟ ಸಭೆಯ ತೀರ್ಮಾನದಂತೆ ದಿನಾಂಕ 27.04.2020 ರಂದು ಮೈಸೂರು ಸಕ್ಕರೆ ಕಾರ್ಖಾನೆಯ ಅಸ್ತಿತ್ವದಲ್ಲಿರುವ ಮಂಡ್ಯದ ಜಾಗಕ್ಕೆ ಮಾತ್ರ ಸೀಮಿತಗೊಳಿಸಿ ಸೇರ್ಪಡೆ ಆದೇಶವನ್ನು ಸಹ ಹೊರಡಿಸಲಾಗಿದೆ.<br>ಅದರಂತೆ, ಪ್ರಸ್ತಾವನೆಯನ್ನು ದಿನಾಂಕ 25.06.2020ರಂದು ನಡೆದ ಸಚಿವ ಸಂಪುಟಕ್ಕೆ ಮರು ಮಂಡಿಸಲಾಗಿದ್ದು, ಮೈಸೂರು ಸಕ್ಕರೆ ಕಾರ್ಖಾನೆಯನ್ನು ಪುನ:ಶ್ಚೇತನಗೊಳಿಸುವ ಕುರಿತು ಸಚಿವ ಸಂಪುಟಕ್ಕೆ ಸೂಕ್ತ ಶಿಫಾರಸ್ಸುಗಳನ್ನು ಮಾಡಲು ಮಾನ್ಯ ಉಪ ಮುಖ್ಯ ಮಂತ್ರಿಗಳು (ಲೋಕೋಪಯೋಗಿ ಮತ್ತು ಸಮಾಜ ಕಲ್ಯಾಣ) ಇವರ ಅಧ್ಯಕ್ಷತೆಯಲ್ಲಿ ಒಂದು ಸಚಿವ ಸಂಪುಟದ ಉಪಸಮಿತಿಯನ್ನು ರಚಿಸಲು ದಿನಾಂಕ 25.06.2020ರಂದು ನಡೆದ ಸಚಿವ ಸಂಪುಟ ಸಭೆಯಲ್ಲಿ ತೀರ್ಮಾನಿಸಲಾಗಿರುತ್ತದೆ.<br>ಅದರಂತೆ ದಿನಾಂಕ 08.07.2020 ರಂದು ನಡೆದ ಸಚಿವ ಸಂಪುಟದ ಉಪಸಮಿತಿಯು ಸದರಿ ಕಾರ್ಖಾನೆಯನ್ನು LROT(Lease Rehabilitate Operate Transfer) ಆಧಾರದ ಮೇಲೆ ಖಾಸಗಿಯವರಿಗೆ ಗುತ್ತಿಗೆ ನೀಡಲು ಅಥವಾ ಓ & ಎಂ |
| ಆ) | ಮಂಡ್ಯ ಮೈಶುಗರ್ ಸಕ್ಕರೆ ಕಾರ್ಖಾನೆಯನ್ನು ಸುಮಾರು 500.00ಕೋಟಿ ವೆಚ್ಚದಲ್ಲಿ ಹೊಸದಾಗಿ ಯಾವಾಗ ಚಾಲನೆ ನೀಡಲು ತೀರ್ಮಾನಿಸಲಾಗಿದೆಯೇ; ಪ್ರಸ್ತುತ ಸದರಿ ಕಾರ್ಖಾನೆಯನ್ನು ಹೊಸದಾಗಿ ಯಾವಾಗ ಚಾಲನೆಗೊಳಿಸಲಾಗುವುದು; (ಸಂಪೂರ್ಣ ಮಾಹಿತಿ ನೀಡುವುದು) | |
| ಇ) | ಪಾಂಡವಪುರ ತಾಲ್ಲೂಕಿನ ಪಾಂಡವಪುರ ಸಕ್ಕರೆ ಕಾರ್ಖಾನೆ ಹಾಗೂ ಕೆ.ಆರ್. ನಗರ ತಾಲ್ಲೂಕಿನ ಚುಂಚನಕಟ್ಟೆ ಗ್ರಾಮದಲ್ಲಿ ಶ್ರೀರಾಮ ಸಕ್ಕರೆ ಕಾರ್ಖಾನೆಗಳ ಪುನರ್ ಆರಂಭಕ್ಕೆ ಸರ್ಕಾರ ಇಲ್ಲಿಯವರೆಗೆ ಕೈಗೊಂಡಿರುವ ಕ್ರಮಗಳ ಸಂಪೂರ್ಣ ಮಾಹಿತಿ ನೀಡುವುದು? | |

| | | |
|---|---|---|
| | | ಆಧಾರದ ಮೇಲೆ ಪುನ:ಶ್ಚೇತನಗೊಳಿಸುವ ಸಾಧಕ ಭಾದಕಗಳ ಕುರಿತು ಕೂಲಂಕಷವಾಗಿ ಚರ್ಚಿಸಿ, ಮೈಸೂರು ಸಕ್ಕರೆ ಕಾರ್ಖಾನೆಯ ವಸ್ತುಸ್ಥಿತಿ ಆಧರಿಸಿ ತಾಂತ್ರಿಕ ವರದಿಯನ್ನು ಬೆಳಗಾವಿಯ ಎಸ್. ನಿಜಲಿಂಗಪ್ಪ ಸಕ್ಕರೆ ಸಂಸ್ಥೆಯ ವತಿಯಿಂದ ರಚಿಸಲಾಗುವ ತಾಂತ್ರಿಕ ಸಮಿತಿಯ ಮೂಲಕ ಪಡೆದು ಸಲ್ಲಿಸುವಂತೆ ಆಯುಕ್ತರು, ಕಬ್ಬು ಅಭಿವೃದ್ಧಿ ಮತ್ತು ಸಕ್ಕರೆ ನಿರ್ದೇಶಕರು ಇವರಿಗೆ ಸೂಚಿಸಿ ಸರ್ವಾನುಮತದಿಂದ ತೀರ್ಮಾನಿಸಲಾಯಿತು.<br>ಅದರಂತೆ ಬೆಳಗಾವಿಯ ಎಸ್. ನಿಜಲಿಂಗಪ್ಪ ಸಕ್ಕರೆ ಸಂಸ್ಥೆಯಿಂದ ಸಲ್ಲಿಸಿರುವ ತಾಂತ್ರಿಕ ವರದಿಯನ್ನು ಆಯುಕ್ತರು, ಕಬ್ಬು ಅಭಿವೃದ್ಧಿ ಮತ್ತು ಸಕ್ಕರೆ ನಿರ್ದೇಶಕರು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.<br>ಆಯುಕ್ತರು, ಕಬ್ಬು ಅಭಿವೃದ್ಧಿ ಮತ್ತು ಸಕ್ಕರೆ ನಿರ್ದೇಶಕರು ಸರ್ಕಾರಕ್ಕೆ ಸಲ್ಲಿಸಿರುವ ತಾಂತ್ರಿಕ ವರದಿಯನ್ನು ಪರಿಶೀಲಿಸಿ ಸಚಿವ ಸಂಪುಟ ಉಪ ಸಮಿತಿಯು ಕೈಗೊಳ್ಳುವ ನಿರ್ಣಯದಂತೆ ಮೈಸೂರು ಸಕ್ಕರೆ ಕಾರ್ಖಾನೆಯನ್ನು ಪುನ:ಶ್ಚೇತನಗೊಳಿಸುವ ಕುರಿತು ಸಚಿವ ಸಂಪುಟದ ಮುಂದೆ ಮಂಡಿಸಿ ಸೂಕ್ತ ನಿರ್ಣಯ ತೆಗೆದುಕೊಳ್ಳಲಾಗುವುದು.<br><br>**<u>ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆ:</u>**<br>ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆಯು ದುಡಿಯುವ ಬಂಡವಾಳದ ಕೊರತೆಯಿಂದಾಗಿ ಕಳೆದ ಐದು ವರ್ಷಗಳಿಂದ ಕಬ್ಬು ನುರಿಸದೇ ಸ್ಥಗಿತಗೊಂಡಿತ್ತು. ಈ ಕಾರ್ಖಾನೆ ವ್ಯಾಪ್ತಿಯ ಕಬ್ಬು ಬೆಳೆದ ರೈತರ, ಕಾರ್ಮಿಕರ ಹಾಗೂ ಕಾರ್ಖಾನೆಯ ಆರ್ಥಿಕ ಹಿತದೃಷ್ಟಿಯಿಂದ ಸದರಿ ಕಾರ್ಖಾನೆಯನ್ನು ಸರ್ಕಾರದ ಆದೇಶ ಸಂಖ್ಯೆ: ವಾಕೈ/24/ಸಸಕಾ/2019, ದಿನಾಂಕ: 27.01.2020 ರನ್ವಯ, ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆಯನ್ನು ಪುನಃಶ್ಚೇತನಗೊಳಿಸಲು 2020-21ನೇ ಹಂಗಾಮಿನಿಂದ 40 ವರ್ಷಗಳ ಅವಧಿಗೆ LROT (Lease Rehabilitate Operate Transfer) ಆಧಾರದ ಮೇಲೆ "ಇದ್ದಲ್ಲಿ ಇದ್ದಂತೆಯೇ" (As is where is) ಖಾಸಗಿಯವರಿಗೆ ಗುತ್ತಿಗೆ ಆಧಾರದ ಮೇಲೆ ನೀಡಲು ಕೆಲವು ಷರತ್ತುಗಳಿಗೊಳಪಟ್ಟು ಅನುಮೋದನೆ ನೀಡಲಾಗಿದೆ.<br>ಅದರಂತೆ, ಸದರಿ ಕಾರ್ಖಾನೆಯನ್ನು ಗುತ್ತಿಗೆ ನೀಡುವ ಸಂಬಂಧ ಟೆಂಡರ್ ಪ್ರಕಟಣೆಯನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿನ ಪಾರದರ್ಶಕ ಅಧಿನಿಯಮ ಮತ್ತು ನಿಯಮಗಳನ್ವಯ ಕೈಗೊಳ್ಳಲಾಗಿತ್ತು. ಟೆಂಡರ್ ಪ್ರಕ್ರಿಯೆಯನ್ನು ಪೂರ್ಣಗೊಂಡ ನಂತರ ಸರ್ಕಾರದ ಆದೇಶ ಸಂಖ್ಯೆ: ಸಿಐ/54/ ಸಿಓಎಫ್/2020, ದಿನಾಂಕ: 04.07.2020 ರನ್ವಯ ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆಯನ್ನು |

1301



| | | |
|---|---|---|
| | | 2020-21ನೇ ಹಂಗಾಮಿನಿಂದ 40 ವರ್ಷಗಳ ಅವಧಿಗೆ LROT (Lease Rehabilitate Operate Transfer) ಆಧಾರದ ಮೇಲೆ "ಇದ್ದಲ್ಲಿ ಇದ್ದಂತೆಯೇ" (As is where is) ಮೆ\|\| ನಿರಾಣಿ ಶುಗರ್ಸ್ ಲಿ., ಮುಧೋಳ, ಬಾಗಲಕೋಟೆ ಜಿಲ್ಲೆ ಇವರಿಗೆ ರೂ.405.00ಕೋಟಿಗಳ ಮೊತ್ತಕ್ಕೆ ಗುತ್ತಿಗೆ ನೀಡಲು ಕೆಲವೊಂದು ಷರತ್ತಿಗೊಳಪಟ್ಟು ಅನುಮತಿ ನೀಡಿ ಆದೇಶಿಸಿದ್ದು, ಕಾರ್ಖಾನೆ ಮತ್ತು ಗುತ್ತಿಗೆದಾರರ ಮಧ್ಯೆ ದಿನಾಂಕ:10.07.2020 ರಂದು ಗುತ್ತಿಗೆ ಕರಾರು ಒಪ್ಪಂದ ಏರ್ಪಟ್ಟಿರುತ್ತದೆ. ಗುತ್ತಿಗೆದಾರರು 2020-21ನೇ ಸಾಲಿನ ಕಬ್ಬು ಅರೆಯುವ ಹಂಗಾಮನ್ನು ಈಗಾಗಲೇ ಪ್ರಾರಂಭಿಸಿರುತ್ತಾರೆ.<br>ಸರ್ಕಾರವು ಸ್ಥಗಿತಗೊಂಡಿದ್ದ ಈ ಕಾರ್ಖಾನೆಯನ್ನು ಗುತ್ತಿಗೆ ನೀಡುವ ಮೂಲಕ ಪುನಃಶ್ಚೇತನಗೊಳಿಸಿದಂತಾಗಿರುತ್ತದೆ. ಇದರಿಂದಾಗಿ ಕಾರ್ಖಾನೆ ವ್ಯಾಪ್ತಿಯ ಕಬ್ಬು ಬೆಳೆಯುವ ರೈತರಿಗೆ ಮತ್ತು ಕಾರ್ಮಿಕರಿಗೆ ಅನುಕೂಲವಾದಂತಾಗಿದೆ.<br>**<u>ಶ್ರೀರಾಮ ಸಹಕಾರಿ ಸಕ್ಕರೆ ಕಾರ್ಖಾನೆ:</u>**<br>ಶ್ರೀರಾಮ ಸಹಕಾರಿ ಸಕ್ಕರೆ ಕಾರ್ಖಾನೆಯನ್ನು ಸರ್ಕಾರವು ಈ ಹಿಂದೆ 2006-07ನೇ ಸಾಲಿನಲ್ಲಿ LROT (Lease Rehabilitate Operate Transfer) ಆಧಾರದ ಮೇಲೆ ಮೆ\|\| ಅಂಬಿಕಾ ಶುಗರ್ಸ್ ಲಿ., ಚನ್ನೈ ಇವರಿಗೆ 22 ವರ್ಷಗಳ ಅವಧಿಗೆ ಗುತ್ತಿಗೆ ನೀಡಲಾಗಿತ್ತು. ಗುತ್ತಿಗೆದಾರರು 2011-12ನೇ ಸಾಲಿನವರೆಗೆ ಕಾರ್ಖಾನೆಯನ್ನು ನಡೆಸಿರುತ್ತಾರೆ. ನಂತರ ಗುತ್ತಿಗೆಯಿಂದ ಮುಂದುವರೆಯಲು ಆಸಕ್ತಿ ವಹಿಸದೇ ಇರುವುದರಿಂದ ಅವರೊಂದಿಗಿನ ಗುತ್ತಿಗೆ ಒಪ್ಪಂದವನ್ನು ರದ್ದುಪಡಿಸಲಾಯಿತು.<br>2012-13ನೇ ಸಾಲಿನಿಂದ ಕಾರ್ಖಾನೆಯನ್ನು ಖಾಸಗಿಯವರಿಗೆ ಗುತ್ತಿಗೆ ನೀಡುವ ಸಂಬಂಧ ಒಟ್ಟು ಐದು ಬಾರಿ ಟೆಂಡರ್ ಕರೆಯಲಾಯಿತು. ಆದರೆ, ಯಾವುದೇ ಟೆಂಡರ್ ದಾರರು ಟೆಂಡರ್ ಸಲ್ಲಿಸದ ಕಾರಣ ಕಾರ್ಖಾನೆಯನ್ನು ಗುತ್ತಿಗೆ ನೀಡುವ ಸರ್ಕಾರದ ಪ್ರಯತ್ನ ಯಶಸ್ವಿಯಾಗಲಿಲ್ಲ.<br>ತದನಂತರ ಸರ್ಕಾರವು ಕಾರ್ಖಾನೆಯ ಕಾರ್ಯ ವ್ಯಾಪ್ತಿಯಲ್ಲಿನ ಕಬ್ಬು ಬೆಳೆಗಾರ ರೈತರ, ಕಾರ್ಮಿಕರ ಹಾಗೂ ಈ ಭಾಗದ ಆರ್ಥಿಕ ಅಭಿವೃದ್ಧಿಯ ಹಿತದೃಷ್ಟಿಯಿಂದ ಕಾರ್ಖಾನೆಯನ್ನು ಪುನಃಶ್ಚೇತನಗೊಳಿಸಲು ನಿರ್ಧರಿಸಿತು.<br>ಅದರಂತೆ, ಸರ್ಕಾರದ ಆದೇಶ ಸಂಖ್ಯೆ:ವಾಕೈ/23/ಸಸಕಾ/2019, ದಿನಾಂಕ: 28.01.2020ರನ್ವಯ ಶ್ರೀರಾಮ ಸಹಕಾರಿ ಸಕ್ಕರೆ ಕಾರ್ಖಾನೆಯನ್ನು ಪುನಃಶ್ಚೇತನಗೊಳಿಸಲು 2020-21ನೇ ಹಂಗಾಮಿನಿಂದ 40 ವರ್ಷಗಳ ಅವಧಿಗೆ LROT (Lease Rehabilitate Operate Transfer) ಆಧಾರದ |

...4

| | | |
|---|---|---|
| | | ಮೇಲೆ"ಇದ್ದಲ್ಲಿ ಇದ್ದಂತೆಯೇ" (As is where is) ಖಾಸಗಿಯವರಿಗೆ ಗುತ್ತಿಗೆ ನೀಡಲು ಕೆಲವು ಷರತ್ತುಗಳಿಗೆ ಒಳಪಟ್ಟು ಅನುಮೋದನೆ ನೀಡಿ ಆದೇಶಿಸಿರುತ್ತದೆ.<br>ಅದರಂತೆ, ಕಾರ್ಖಾನೆಯನ್ನು ಗುತ್ತಿಗೆ ನೀಡುವ ಸಂಬಂಧ ಟೆಂಡರ್ ಪ್ರಕಟಣೆಯನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿನ ಪಾರದರ್ಶಕ ಅಧಿನಿಯಮ ಮತ್ತು ನಿಯಮಗಳನ್ವಯ ಕೈಗೊಳ್ಳಲಾಗಿತ್ತು. ಟೆಂಡರ್ ಪ್ರಕ್ರಿಯೆ ಪೂರ್ಣಗೊಂಡಿದ್ದು, ಟೆಂಡರ್ ಪ್ರಕ್ರಿಯೆಯಲ್ಲಿ ಮೆ\|\| ನಿರಾಣಿ ಶುಗರ್ಸ್ ಲಿ., ಮುಧೋಳ, ಬಾಗಲಕೋಟೆ ಜಿಲ್ಲೆ ಈ ಸಂಸ್ಥೆಯು ಮಾತ್ರ ಭಾಗವಹಿಸಿ 40 ವರ್ಷಗಳ ಗುತ್ತಿಗೆ ಅವಧಿಗೆ ರೂ.104.20 ಕೋಟಿಗಳ ಮೊತ್ತವನ್ನು ನೀಡಲು ಬಿಡ್ ಸಲ್ಲಿಸಿರುತ್ತದೆ.<br>ಈ ಸಂಬಂಧದ ಪ್ರಸ್ತಾವನೆಯು ಪ್ರಸ್ತುತ ಸರ್ಕಾರದ ಪರಿಶೀಲನೆಯಲ್ಲಿರುತ್ತದೆ. |

ಸಂಖ್ಯೆ: ಸಿಐ 198 ಸಿಓಎಫ್ 2020

(ಅರಬೈಲ್ ಶಿವರಾಮ ಹೆಬ್ಬಾರ)
ಕಾರ್ಮಿಕ ಮತ್ತು ಸಕ್ಕರೆ ಸಚಿವರು

## ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | | 1303 |
| ಸದಸ್ಯರ ಹೆಸರು | | ಶ್ರೀ ಹಾಲಪ್ಪ ಹರತಾಳ್ ಹೆಚ್ (ಸಾಗರ) |
| ಉತ್ತರಿಸಬೇಕಾದ ದಿನಾಂಕ | | 24.09.2020 |
| ಉತ್ತರಿಸಬೇಕಾದ ಸಚಿವರು | | ಉಪ ಮುಖ್ಯಮಂತ್ರಿ (ಉನ್ನತ ಶಿಕ್ಷಣ) |
| ಪ್ರಶ್ನೆ | | ಉತ್ತರ |
| ಅ) | ಸಾಗರ ಮತ್ತು ಹೊಸನಗರ ತಾಲ್ಲೂಕಿನ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಬೋಧಕೇತರ ಹುದ್ದೆಗಳು ಖಾಲಿ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ಖಾಲಿ ಹುದ್ದೆಗಳ ಪೂರ್ಣ ವಿವರ ಕಾಲೇಜುವಾರು ಒದಗಿಸುವುದು) | ಹೌದು.<br><br>ಸಾಗರ ಮತ್ತು ಹೊಸನಗರ ತಾಲ್ಲೂಕಿನ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿನ ಬೋಧಕೇತರ ನೌಕರರ ಕಾಲೇಜುವಾರು ಖಾಲಿ ಹುದ್ದೆಗಳ ವಿವರಗಳನ್ನು ಅನುಬಂಧದಲ್ಲಿ ಲಗತ್ತಿಸಿದೆ. |
| ಆ) | ಹಾಗಿದ್ದಲ್ಲಿ, ಕಾಲೇಜುಗಳಲ್ಲಿ ವಿದ್ಯಾರ್ಥಿಗಳ ಪ್ರವೇಶ ಮತ್ತಿತರ ಕಛೇರಿ ಕಾರ್ಯಗಳಿಗೆ ಅಡಚಣೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| ಇ) | ಬಂದಿದ್ದಲ್ಲಿ, ಸದರಿ ಕಾಲೇಜುಗಳಲ್ಲಿ ಬೋಧಕೇತರ ಹುದ್ದೆಗಳನ್ನು ಭರ್ತಿ ಮಾಡಲು ಇರುವ ತೊಂದರೆಗಳೇನು ಹಾಗೂ ಭರ್ತಿ ಮಾಡಲು ಕೈಗೊಂಡ ಕ್ರಮಗಳೇನು? (ವಿವರ ಒದಗಿಸುವುದು) | ***ಬೋಧಕೇತರರ ಹುದ್ದೆಗಳು:***<br><br>ಇಲಾಖೆಯಲ್ಲಿ ಖಾಲಿ ಇರುವ ಪ್ರಥಮ ದರ್ಜೆ ಸಹಾಯಕರು ಮತ್ತು ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳ ಪೈಕಿ 123 ಪ್ರಥಮ ದರ್ಜೆ ಸಹಾಯಕರು ಮತ್ತು 88 ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳನ್ನು ಭರ್ತಿ ಮಾಡುವ ಸಂಬಂಧ ಸರ್ಕಾರದ ಪತ್ರ ಸಂಖ್ಯೆ:ಇಡಿ 116 ಯುಇಸಿ 2016 ದಿನಾಂಕ:21.05.2019ರಲ್ಲಿ ಅನುಮತಿ ನೀಡಲಾಗಿದ್ದು, ಅದರಂತೆ, ಸದರಿ ಹುದ್ದೆಗಳನ್ನು ಭರ್ತಿ ಮಾಡಲು ಕರ್ನಾಟಕ ಲೋಕಸೇವಾ ಆಯೋಗಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿದೆ. ಕರ್ನಾಟಕ ಲೋಕಸೇವಾ ಆಯೋಗದಿಂದ ಅರ್ಹ ಅಭ್ಯರ್ಥಿಗಳ ಪಟ್ಟಿಯನ್ನು ನೀಡಿದ ನಂತರ ಸದರಿ ಖಾಲಿ ಹುದ್ದೆಗಳನ್ನು ನಿಯಮಾನುಸಾರ ಭರ್ತಿ ಮಾಡಲು ಕ್ರಮವಹಿಸಲಾಗುವುದು. |

| | | |
|---|---|---|
| | | ಮುಂದುವರೆದು, 102 ಡಾಟಾ ಎಂಟ್ರಿ ಆಪರೇಟರ್‌ಗಳು ಮತ್ತು 347 ಪರಿಚಾರಕರ ಹುದ್ದೆಗಳನ್ನು ಹೊರಗುತ್ತಿಗೆ ಆಧಾರದ ಮೇಲೆ ಬಳಸಿಕೊಳ್ಳಲು ಅನುಮತಿಸಲಾಗಿದ್ದು, ಅದರನ್ವಯ ಇಲಾಖೆಯು ಸದರಿ ಹುದ್ದೆಗಳನ್ನು ಭರ್ತಿ ಮಾಡಲು ಕ್ರಮವಹಿಸಿದೆ.<br><br>ಉಳಿದಂತೆ ಇಲಾಖೆಯಲ್ಲಿ ಖಾಲಿ ಇರುವ ಪರಿಚಾರಕರ (ಗ್ರೂಪ್-ಡಿ) 1177 ಹುದ್ದೆಗಳಿಗೆ ಹೊರಗುತ್ತಿಗೆ ಆಧಾರದ ಮೇಲೆ ಸೇವೆಯನ್ನು ಬಳಸಿಕೊಳ್ಳಲು ಆರ್ಥಿಕ ಇಲಾಖೆಯೊಂದಿಗೆ ಸಮಾಲೋಚಿಸಲಾಗುತ್ತಿದೆ. |

ಇಡಿ 99 ಯುಇಸಿ 2020

(ಡಾ: ಅಶ್ವಥ್ ನಾರಾಯಣ ಸಿ.ಎನ್.)
ಉಪ ಮುಖ್ಯಮಂತ್ರಿಗಳು (ಉನ್ನತ ಶಿಕ್ಷಣ)

## ಅನುಬಂಧ

## ಸಾಗರ ಮತ್ತು ಹೊಸನಗರ ತಾಲ್ಲೂಕಿನ ವ್ಯಾಪ್ತಿಯಲ್ಲಿ ಬರುವ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿರುವ ಬೋಧಕೇತರ ಖಾಲಿ ಹುದ್ದೆಗಳ ವಿವರಗಳು

### ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಹೊಸನಗರ

| ಕ್ರ.ಸಂ | ವೃಂದ | ಮಂಜೂರಾದ ಹುದ್ದೆ | ಭರ್ತಿ ಹುದ್ದೆ | ಖಾಲಿ ಹುದ್ದೆ |
|---|---|---|---|---|
| 01 | ಅಧೀಕ್ಷಕರು | 1 | 1 | 0 |
| 02 | ಪ್ರಥಮ ದರ್ಜೆ ಸಹಾಯಕರು | 1 | 0 | 1 |
| 03 | ದ್ವಿತೀಯ ದರ್ಜೆ ಸಹಾಯಕರು | 1 | 0 | 1 |
| 04 | ಬೆರಳಚ್ಚುಗಾರರು | 1 | 0 | 1 |
| 05 | ಅಟೆಂಡರ್‌ಗಳು | 2 | 0 | 2 |
| 06 | ಪರಿಚಾರಕರು | 2 | 0 | 2 |
| | ಒಟ್ಟು | 08 | 01 | 07 |

### ಸರ್ಕಾರಿ ಪ್ರಥಮ ದರ್ಜೆ ಕಾಲೇಜು ರಿಪ್ಪನ್‌ಪೇಟೆ

| ಕ್ರ.ಸಂ | ವೃಂದ | ಮಂಜೂರಾದ ಹುದ್ದೆ | ಭರ್ತಿ ಹುದ್ದೆ | ಖಾಲಿ ಹುದ್ದೆ |
|---|---|---|---|---|
| 01 | ಅಧೀಕ್ಷಕರು | 1 | 1 | 0 |
| 02 | ಪ್ರಥಮ ದರ್ಜೆ ಸಹಾಯಕರು | 1 | 1 | 0 |
| 03 | ದ್ವಿತೀಯ ದರ್ಜೆ ಸಹಾಯಕರು | 0 | 0 | 0 |
| 04 | ಬೆರಳಚ್ಚುಗಾರರು | 1 | 0 | 1 |
| 05 | ಅಟೆಂಡರ್‌ಗಳು | 3 | 1 | 2 |
| 06 | ಪರಿಚಾರಕರು | 3 | 1 | 2 |
| | ಒಟ್ಟು | 09 | 04 | 05 |

### ಸರ್ಕಾರಿ ಮಹಿಳಾ ಕಾಲೇಜು, ಸಾಗರ

| ಕ್ರ.ಸಂ | ವೃಂದ | ಮಂಜೂರಾದ ಹುದ್ದೆ | ಭರ್ತಿ ಹುದ್ದೆ | ಖಾಲಿ ಹುದ್ದೆ |
|---|---|---|---|---|
| 01 | ಗೆಜೆಟೆಡ್ ಮ್ಯಾನೇಜರ್ | 1 | 1 | 0 |
| 02 | ಅಧೀಕ್ಷಕರು | 1 | 0 | 1 |
| 03 | ಪ್ರಥಮ ದರ್ಜೆ ಸಹಾಯಕರು | 1 | 0 | 1 |
| 04 | ದ್ವಿತೀಯ ದರ್ಜೆ ಸಹಾಯಕರು | 3 | 1 | 2 |
| 05 | ಬೆರಳಚ್ಚುಗಾರರು | 1 | 1 | 0 |
| 06 | ಅಟೆಂಡರ್‌ಗಳು | 2 | 1 | 1 |

| | | | | |
|---|---|---|---|---|
| 07 | ಪರಿಚಾರಕರು | 1 | 0 | 1 |
| ಒಟ್ಟು | | 10 | 04 | 06 |

## ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಸಾಗರ

| ಕ್ರ.ಸಂ | ವೃಂದ | ಮಂಜೂರಾದ ಹುದ್ದೆ | ಭರ್ತಿ ಹುದ್ದೆ | ಖಾಲಿ ಹುದ್ದೆ |
|---|---|---|---|---|
| 01 | ಗೆಜೆಟೆಡ್ ಮ್ಯಾನೇಜರ್ | 1 | 1 | 0 |
| 02 | ಅಧೀಕ್ಷಕರು | 1 | 1 | 0 |
| 03 | ಪ್ರಥಮ ದರ್ಜೆ ಸಹಾಯಕರು | 1 | 0 | 1 |
| 04 | ದ್ವಿತೀಯ ದರ್ಜೆ ಸಹಾಯಕರು | 1 | 0 | 1 |
| 05 | ಬೆರಳಚ್ಚುಗಾರರು | 1 | 0 | 1 |
| 06 | ಅಟೆಂಡರ್‌ಗಳು | 2 | 1 | 1 |
| 07 | ಪರಿಚಾರಕರು | 3 | 0 | 3 |
| ಒಟ್ಟು | | 10 | 03 | 07 |

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1361
ಸದಸ್ಯರ ಹೆಸರು : ಶ್ರೀ ದೇವಾನಂದ್ ಫುಲಸಿಂಗ್ ಚವಾಣ್ (ನಾಗಠಾಣ)
ಉತ್ತರಿಸಬೇಕಾದ ದಿನಾಂಕ : 24.09.2020
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು

| ಕ್ರಸ | ಪ್ರಶ್ನೆ | ಉತ್ತರ |
|---|---|---|
| ಅ) | ನಾಗಠಾಣ ವಿಧಾನಸಭಾ ಕ್ಷೇತ್ರಕ್ಕೆ ಶಿಕ್ಷಣ ಇಲಾಖೆಯಲ್ಲಿನ ವಿವಿಧ ಯೋಜನೆಗಳಿಂದ ಬಿಡುಗಡೆಯಾದ ಅನುದಾನವೆಷ್ಟು; ಹಾಗೂ ಕೈಗೊಂಡ ಕಾಮಗಾರಿಗಳು ಯಾವುವು; (ವಿವರವಾದ ಮಾಹಿತಿ ನೀಡುವುದು) | 1. 2019-20ನೇ ಸಾಲಿನಲ್ಲಿ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳ ಕೊಠಡಿಗಳ ನಿರ್ಮಾಣ ಕುರಿತಂತೆ ವಿವಿಧ ಯೋಜನೆಗಳಡಿ 08 ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳ 18 ಕೊಠಡಿಗಳಿಗೆ ರೂ.216.95 ಲಕ್ಷಗಳ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲಾಗಿದೆ.<br>2. 2019-20ನೇ ಸಾಲಿನಲ್ಲಿ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳ ಕೊಠಡಿಗಳ ದುರಸ್ಥಿ ಕುರಿತಂತೆ ವಿವಿಧ ಯೋಜನೆಗಳಡಿ 12 ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳ 19 ಕೊಠಡಿಗಳಿಗೆ ರೂ.20.77 ಲಕ್ಷಗಳ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲಾಗಿದೆ.<br>(ವಿವರವನ್ನು ಅನುಬಂಧ-1ರಲ್ಲಿ ಲಗತ್ತಿಸಿದೆ) |
| ಆ) | ಪ್ರಸಕ್ತ ಸಾಲಿನಲ್ಲಿ ಪ್ರಾಥಮಿಕ ಹಾಗೂ ಪ್ರೌಢಶಾಲೆಗಳನ್ನು ಪ್ರಾರಂಭಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಕೇಂದ್ರ ಸರ್ಕಾರದ ಮಾರ್ಗಸೂಚಿಯನ್ವಯ ಕ್ರಮವಹಿಸಲಾಗುವುದು. |
| ಇ) | ಶಾಲೆಗಳನ್ನು ಪ್ರಾರಂಭಿಸಲು ಪ್ರಸ್ತಾವನೆ ಸರ್ಕಾರದ ಮುಂದಿದ್ದಲ್ಲಿ ಯಾವ ತರಗತಿಗಳನ್ನು ಪ್ರಾರಂಭಿಸಲಾಗುವುದು; (ವಿವರವಾದ ಮಾಹಿತಿ ನೀಡುವುದು) | ಕೇಂದ್ರ ಸರ್ಕಾರದ ಮಾರ್ಗಸೂಚಿಯನ್ವಯ ಕ್ರಮವಹಿಸಲಾಗುವುದು. |
| ಈ) | ಶಾಲೆಗಳನ್ನು ಆರಂಭಿಸಿದಲ್ಲಿ ವಿದ್ಯಾರ್ಥಿಗಳು ಹಾಗೂ ಶಿಕ್ಷಕರ ಆರೋಗ್ಯ ದೃಷ್ಠಿಯಿಂದ ಸರ್ಕಾರ ಕೈಗೊಂಡ ಮುನ್ನೆಚ್ಚರಿಕೆ ಕ್ರಮಗಳೇನು? (ಸ್ಪಷ್ಟವಾದ ಮಾಹಿತಿ ನೀಡುವುದು) | ಶಾಲೆಗಳನ್ನು ಆರಂಭಿಸಿದ್ದಲ್ಲಿ ಕೋವಿಡ್-19 ಹಿನ್ನಲೆಯಲ್ಲಿ ವಿದ್ಯಾರ್ಥಿಗಳು ಹಾಗೂ ಶಿಕ್ಷಕರ ಆರೋಗ್ಯ ದೃಷ್ಠಿಯಿಂದ ಕೇಂದ್ರ ಸರ್ಕಾರದ ಮಾರ್ಗಸೂಚಿಯನ್ವಯ ಪ್ರಾಮಾಣಿಕ ಕಾರ್ಯಕಾರಿ ವಿಧಾನಗಳನ್ನು (SOP) ಸಿದ್ದಪಡಿಸಿ ಸುರಕ್ಷತಾ ಕ್ರಮ ಕೈಗೊಳ್ಳಲಾಗುವುದು. |

ಇಪಿ 174 ಯೋಸಕ 2020

(ಎಸ್.ಸುರೇಶ್ ಕುಮಾರ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು

ಅನುಬಂಧ-1 (4) 1361

ಸನ್ 2019-20ನೇ ಸಾಲಿಗೆ ನಾಗಠಾಣ ಮತಕ್ಷೇತ್ರದ ಶಾಲೆಗಳಿಗೆ ಬಿಡುಗಡೆಯಾದಅನುದಾನದ ವಿವರ

| ಕ್ರ.ಸಂ | ಶಾಲೆಯ ಹೆಸರು | ಬಿಡುಗಡೆಯಾದ ಅನುದಾನ(ಲಕ್ಷ ರೂಗಳಲ್ಲಿ) | ಕೊಠಡಿಗಳ ಸಂಖ್ಯೆ |
|---|---|---|---|
| ಪ್ರಾಥಮಿಕ ಮತ್ತು ಪ್ರೌಢಶಾಲೆಗಳ ಕೊಠಡಿ ನಿರ್ಮಾಣ | | | |
| 1 | ಕೆ.ಎಲ್.ಪಿ.ಎಸ್.ಇಂಚಗೇರಿ ಎಲ್.ಟಿ.3 | 21.20 | 2 |
| 2 | ಸರ್ಕಾರಿ ಪ್ರೌಢಶಾಲೆ ನಾಗಠಾಣ | 15.75 | 1 |
| 3 | ಸರ್ಕಾರಿ ಪ್ರಾಥಮಿಕ ಶಾಲೆ ಜಿಗಜೇವಣಿಎಚ್.ಕೆ. | 36.00 | 3 |
| 4 | ಸರ್ಕಾರಿ ಪ್ರಾಥಮಿಕ ಶಾಲೆ ದೂಮಕನಾಳ | 24.00 | 2 |
| 5 | ಸರ್ಕಾರಿ ಪ್ರಾಥಮಿಕ ಶಾಲೆ ಶಿರಾಡೋಣ | 36.00 | 3 |
| 6 | ಸರ್ಕಾರಿ ಪ್ರಾಥಮಿಕ ಶಾಲೆ ಕಂಚನಾಳ | 24.00 | 2 |
| 7 | ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ತದ್ದೇವಾಡಿ | 24.00 | 2 |
| 8 | ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಗೊಟ್ಯಿಹಾಳ | 36.00 | 3 |
| ಒಟ್ಟು | | 216.95 | 18 |
| ಸರ್ಕಾರಿ ಪ್ರಾಥಮಿಕ ಶಾಲೆಗಳ ರಿಪೇರಿ | | | |
| | | | |
| 1 | ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಹತ್ತಳ್ಳಿ | 4.272 | 8 |
| 2 | ಎಚ್.ಪಿ.ಎಸ್.ತದ್ದೇವಾಡ | 1.50 | 1 |
| 3 | ಎಚ.ಪಿ.ಎಸ್.ಶಿರಾಡೋಣ | 1.50 | 1 |
| 4 | ಎಚ್.ಪಿ.ಎಸ್.ಕಂಚನಾಳ | 1.50 | 1 |
| 5 | ಎಚ್.ಪಿ.ಎಸ್.ಜೇವೂರ | 1.50 | 1 |
| 6 | ಎಚ್.ಪಿ.ಎಸ್.ಗೋಟ್ಯಾಳ | 1.50 | 1 |
| 7 | ಎಚ್.ಪಿ.ಎಸ್.ಜಿಗಜೇವಣಿ | 1.50 | 1 |
| 8 | ಎಚ್.ಪಿ.ಎಸ್.ಧೂಮಕನಾಳ | 1.50 | 1 |
| 9 | ಎಚ್.ಪಿ.ಎಸ್.ತದ್ದೇವಾಡ | 1.50 | 1 |
| 10 | ಎಚ.ಪಿ.ಎಸ್.ಶಿರಾಡೋಣ | 1.50 | 1 |
| 11 | ಎಚ್.ಪಿ.ಎಸ್.ಕಂಚನಾಳ | 1.50 | 1 |
| 12 | ಎಚ್.ಪಿ.ಎಸ್.ಜೇವೂರ | 1.50 | 1 |
| ಒಟ್ಟು | | 20.772 | 18 |

ಅಪರ ಆಯುಕ್ತರು
ಸಾರ್ವಜನಿಕ ಶಿಕ್ಷಣ ಇಲಾಖೆ
ಧಾರವಾಡ



# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1363
2. ಸದಸ್ಯರ ಹೆಸರು : ಶ್ರೀ ಸಂಗಮೇಶ್ವರ್ ಬಿ.ಕೆ
3. ಉತ್ತರಿಸಬೇಕಾದ ದಿನಾಂಕ : 24.09.2020
4. ಉತ್ತರಿಸಬೇಕಾದ ಸಚಿವರು : ಮಾನ್ಯ ವೈದ್ಯಕೀಯ ಶಿಕ್ಷಣ ಸಚಿವರು

| ಕ್ರ. ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ರಾಜ್ಯದಲ್ಲಿ ಪ್ರಸ್ತುತ ವೈದ್ಯಕೀಯ ಶಿಕ್ಷಣ ನೀಡುತ್ತಿರುವ ಕಾಲೇಜುಗಳೆಷ್ಟು; | ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯಕ್ಕೆ ಸಂಯೋಜನೆಗೊಂಡ ವೈದ್ಯಕೀಯ ಶಿಕ್ಷಣ ನೀಡುತ್ತಿರುವ ಕಾಲೇಜುಗಳ ಸಂಖ್ಯೆ:50 |
| ಆ) | ಪ್ರತಿವರ್ಷ ಎಷ್ಟು ಜನ ವಿದ್ಯಾರ್ಥಿಗಳು ಈ ಕಾಲೇಜುಗಳಿಗೆ ಪ್ರವೇಶ ಪಡೆಯುತ್ತಿದ್ದಾರೆ; | ಎಂ.ಬಿ.ಬಿ.ಎಸ್ ಪದವಿ- 6795<br>ಸ್ನಾತಕೋತ್ತರ ಪದವಿ- 2626 |
| ಇ) | ಕಾಲೇಜುವಾರು, ಕೋರ್ಸುವಾರು ಪ್ರವೇಶ ಪಡೆಯುತ್ತಿರುವ ವಿದ್ಯಾರ್ಥಿಗಳ ಸಂಖ್ಯೆಯನ್ನು ನೀಡುವುದು; | ಮಾಹಿತಿಯನ್ನು ಅನುಬಂಧ-1ರಲ್ಲಿ ಲಗತ್ತಿಸಲಾಗಿದೆ. |
| ಈ) | ರಾಜ್ಯದ ವೈದ್ಯಕೀಯ ಶಿಕ್ಷಣದ ಕಾಲೇಜುಗಳಿಗೆ ಪ್ರವೇಶ ಪಡೆಯುವ ರಾಜ್ಯದ ವಿದ್ಯಾರ್ಥಿಗಳೆಷ್ಟು; ಹೊರ ರಾಜ್ಯದ ವಿದ್ಯಾರ್ಥಿಗಳೆಷ್ಟು; ಕಾಲೇಜುವಾರು ಸಂಪೂರ್ಣ ವಿವರ ನೀಡುವುದು? | ಮಾಹಿತಿಯನ್ನು ಅನುಬಂಧ-2ರಲ್ಲಿ ಲಗತ್ತಿಸಲಾಗಿದೆ. |

**ಸಂಖ್ಯೆ:** ಎಂಇಡಿ 345 ಎಂಎಸ್ಎಫ್ 2020

**(ಡಾ: ಕೆ. ಸುಧಾಕರ್)**
ವೈದ್ಯಕೀಯ ಶಿಕ್ಷಣ ಸಚಿವರು.

1363 (4)

ಅನುಬಂಧ -1

2020-21ನೇ ಸಾಲಿನಲ್ಲಿ UG/PG ಶಿಕ್ಷಣ ಪ್ರವೇಶ ಪಡೆದ ವಿದ್ಯಾರ್ಥಿಗಳ ವಿವರ

| | | UG | | PG | |
|---|---|---|---|---|---|
| S No | CollegeName | Intake | Admitted | Intake | Admitted |
| 1 | AJ Institute of Medical Sciences | 150 | 150 | 113 | 97 |
| 2 | Al Ameen Medical College | 150 | 150 | 73 | 68 |
| 3 | Bangalore Medical College | 250 | 250 | 280 | 267 |
| 4 | Basaveshwara Medical College | 100 | 100 | 40 | 30 |
| 5 | Belagavi Institute of Medical Sciences | 150 | 150 | 28 | 17 |
| 6 | BGS Global Institute of Medical Sciences | 150 | 150 | 57 | 40 |
| 7 | Bidar Institute of Medical Sciences | 150 | 150 | 10 | 2 |
| 8 | Command Hospital | | | 31 | 31 |
| 9 | Dharwad Institute of Mental Haealth & | | | 4 | 4 |
| 10 | Dr B R Ambedkar Medical College | 100 | 100 | 74 | 64 |
| 11 | ESIC Medical College, Bengaluru | 100 | 100 | 55 | 52 |
| 12 | Fr Muller Medical College | 150 | 150 | 101 | 86 |
| 13 | Gadag Institute of Medical Sciences | 150 | 150 | 44 | 32 |
| 14 | Hassan Institute of Medical Sciences | 150 | 150 | 43 | 35 |
| 15 | Indira Gandhi Institute of Child Health | | | 22 | 22 |
| 16 | Institute of Aerospace Medicine | | | 17 | 10 |
| 17 | J J M Medical College | 245 | 245 | 220 | 184 |
| 18 | K V G Medical College | 100 | 100 | 60 | 47 |
| 19 | Karnataka Institute of Medical Sciences | 200 | 200 | 165 | 155 |
| 20 | Kempegowda Institute of Medical Sciences | 150 | 150 | 86 | 86 |
| 21 | Kidwai Memorial Institute of Oncology | | | 25 | 25 |
| 22 | M R Medical College | 150 | 150 | 127 | 109 |
| 23 | M S Ramaiah Medical College | 150 | 150 | 157 | 138 |
| 24 | Mandya Institute of Medical Sciences | 150 | 150 | 59 | 52 |
| 25 | MVJ Medical College | 150 | 150 | 63 | 63 |
| 26 | Mysore Medical College | 250 | 250 | 153 | 148 |
| 27 | Navodaya Medical College | 150 | 150 | 101 | 83 |
| 28 | Raichur Institute of Medical Sciences | 150 | 150 | 12 | 12 |
| 29 | S Nijalingappa Medical College | 150 | 150 | 98 | 69 |
| 30 | S S Institute of Medical Sciences | 150 | 150 | 61 | 41 |
| 31 | Sanjay Gandhi Accidental Trauma Centre | | | 10 | 10 |
| 32 | Sapthagiri Institute of Medical Sciences | 150 | 150 | 78 | 66 |
| 33 | Shimoga Institute of Medical Sciences | 150 | 150 | 42 | 36 |
| 34 | Shridevi Institute of Medical Sciences | 150 | 150 | 45 | 34 |
| 35 | Srinivas institute of Medical Sciences | 150 | 150 | 42 | 42 |
| 36 | St John's Medical College | 150 | 150 | 131 | 117 |
| 37 | The Oxford Medical College | 150 | 150 | 62 | 38 |
| 38 | Vijayanagar Institute of Medical Sciences | 150 | 150 | 106 | 95 |
| 39 | Vydehi Institute of Medical Sciences | 250 | 250 | 138 | 119 |
| 40 | Akash Institute of Medical Sciences | 150 | 150 | | |
| 41 | Bowring Institute of Medical Sciences | 150 | 150 | | |
| 42 | Chamarajanagar Institute of Medical Sciences | 150 | 150 | | |
| 43 | East Point Medical College | 150 | 150 | | |
| 44 | ESI, Gulbarga | 100 | 100 | | |
| 45 | Gulbarga Institute of Medical Sciences | 150 | 150 | | |
| 46 | Kanachur Institute of Medical Sciences | 150 | 150 | | |
| 47 | Subbaiah Institute of Medical Sciences | 150 | 150 | | |
| 48 | Kodagu Institute of Medical Sciences | 150 | 150 | | |
| 49 | Karwar Institute of Medical Sciences | 150 | 150 | | |
| 50 | Koppal Institute of Medical Sciences | 150 | 150 | | |
| | | 6795 | 6795 | 3033 | 2626 |

Note:

| |
|---|
| Admissions to PG courses for the year 2020-21 is completed. Hence the information related to 2020-21 is given. |
| Admissions to UG courses for the year 2020-21 has not started. After the annoucements of NEET results, the counseling process will commence. Hence, the information related to 2019-20 is given |

ಅನುಬಂಧ -2

2020-21ನೇ ಸಾಲಿನಲ್ಲಿ PG ಶಿಕ್ಷಣ ಪ್ರವೇಶ ಪಡೆದ ರಾಜ್ಯದ ಹಾಗೂ ಹೊರ ರಾಜ್ಯದ ವಿದ್ಯಾರ್ಥಿಗಳ ವಿವರ

| S No | CollegeName | Intake | Admitted | KARNATAKA | NON-KARNATAKA |
|---|---|---|---|---|---|
| 1 | AJ Institute of Medical Sciences | 113 | 97 | 64 | 33 |
| 2 | Al Ameen Medical College | 73 | 68 | 48 | 20 |
| 3 | Bangalore Medical College | 280 | 267 | 214 | 53 |
| 4 | Basaveshwara Medical College | 40 | 30 | 22 | 8 |
| 5 | Belagavi Institute of Medical Sciences | 28 | 17 | 12 | 5 |
| 6 | BGS Global Institute of Medical Sciences | 57 | 40 | 25 | 15 |
| 7 | Bidar Institute of Medical Sciences | 10 | 2 | 2 | 0 |
| 8 | Command Hospital | 31 | 31 | 3 | 28 |
| 9 | Dharwad Institute of Mental Haealth & Neurosciences | 4 | 4 | 3 | 1 |
| 10 | Dr B R Ambedkar Medical College | 74 | 64 | 42 | 22 |
| 11 | ESIC Medical College, Bengaluru | 55 | 52 | 38 | 14 |
| 12 | Fr Muller Medical College | 101 | 86 | 65 | 21 |
| 13 | Gadag Institute of Medical Sciences | 44 | 32 | 25 | 7 |
| 14 | Hassan Institute of Medical Sciences | 43 | 35 | 30 | 5 |
| 15 | Indira Gandhi Institute of Child Health | 22 | 22 | 20 | 2 |
| 16 | Institute of Aerospace Medicine | 17 | 10 | 2 | 8 |
| 17 | J J M Medical College | 220 | 184 | 131 | 53 |
| 18 | K V G Medical College | 60 | 47 | 23 | 24 |
| 19 | Karnataka Institute of Medical Sciences | 165 | 155 | 122 | 33 |
| 20 | Kempegowda Institute of Medical Sciences | 86 | 86 | 64 | 22 |
| 21 | Kidwai Memorial Institute of Oncology | 25 | 25 | 18 | 7 |
| 22 | M R Medical College | 127 | 109 | 95 | 14 |
| 23 | M S Ramaiah Medical College | 157 | 138 | 107 | 31 |
| 24 | Mandya Institute of Medical Sciences | 59 | 52 | 38 | 14 |
| 25 | MVJ Medical College | 63 | 63 | 49 | 14 |
| 26 | Mysore Medical College | 153 | 148 | 111 | 37 |
| 27 | Navodaya Medical College | 101 | 83 | 63 | 20 |
| 28 | Raichur Institute of Medical Sciences | 12 | 12 | 6 | 6 |
| 29 | S Nijalingappa Medical College | 98 | 69 | 55 | 14 |
| 30 | S S Institute of Medical Sciences | 61 | 41 | 29 | 12 |
| 31 | Sanjay Gandhi Accidental Trauma Centre | 10 | 10 | 8 | 2 |
| 32 | Sapthagiri Institute of Medical Sciences | 78 | 66 | 47 | 19 |
| 33 | Shimoga Institute of Medical Sciences | 42 | 36 | 27 | 9 |
| 34 | Shridevi Institute of Medical Sciences | 45 | 34 | 19 | 15 |
| 35 | Srinivas institute of Medical Sciences | 42 | 42 | 34 | 8 |
| 36 | St John's Medical College | 131 | 117 | 84 | 33 |
| 37 | The Oxford Medical College | 62 | 38 | 26 | 12 |
| 38 | Vijayanagar Institute of Medical Sciences | 106 | 95 | 82 | 13 |
| 39 | Vydehi Institute of Medical Sciences | 138 | 119 | 76 | 43 |
| | Total | 3033 | 2626 | 1929 | 697 |

Note:

| |
|---|
| Admissions to PG courses for the year 2020-21 is completed. |
| Admissions to UG courses for the year 2020-21 has not started. After the annoucements of NEET results, the counseling process will commence. |

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1366
2. ಸದಸ್ಯರ ಹೆಸರು : ಶ್ರೀ ರಘುಪತಿಭಟ್.ಕೆ.
3. ಉತ್ತರಿಸಬೇಕಾದ ದಿನಾಂಕ : 24.09.2020
4. ಉತ್ತರಿಸುವ ಸಚಿವರು : ಕಾರ್ಮಿಕ ಮತ್ತು ಸಕ್ಕರೆ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬ್ರಹ್ಮಾವರ ಸಕ್ಕರೆ ಕಾರ್ಖಾನೆಯನ್ನು ಪುನಃಶ್ಚೇತನಗೊಳಿಸುವಲ್ಲಿ ಸರ್ಕಾರದ ನಿಲುವೇನು; | ಸರ್ಕಾರವು ಕಾರ್ಖಾನೆಯನ್ನು ಪುನ:ಶ್ಚೇತನಗೊಳಿಸುವ ಸಲುವಾಗಿ ಮೆ\|\| ರಾಮೀ ಶುಗರ್ಸ್ ಪ್ರೈ. ಲಿ., ಮುಂಬೈ ಇವರಿಗೆ 2007-08ನೇ ಸಾಲಿನಿಂದ 30 ವರ್ಷಗಳ ಅವಧಿಗೆ ಎಲ್.ಆರ್.ಓ.ಟಿ. ಆಧಾರದ ಮೇಲೆ ರೂ.31.68 ಕೋಟಿಗಳಿಗೆ ಗುತ್ತಿಗೆಗೆ ನೀಡಲಾಗಿತ್ತು. ನಂತರ ಗುತ್ತಿಗೆದಾರರು ಗುತ್ತಿಗೆ ಒಪ್ಪಂದ ಮುಂದುವರೆಸಲು ಆಸಕ್ತಿ ವಹಿಸಲಿಲ್ಲವಾದ್ದರಿಂದ ಕಾರ್ಖಾನೆಯನ್ನು ಗುತ್ತಿಗೆ ನೀಡುವುದರ ಮೂಲಕ ಪುನ:ಶ್ಚೇತನಗೊಳಿಸಲು ಕೈಗೊಂಡ ಸರ್ಕಾರದ ಪ್ರಯತ್ನ ಯಶಸ್ವಿಯಾಗಲಿಲ್ಲ.<br><br>ದಿನಾಂಕ 07.09.2018 ರಂದು ಅಂದಿನ ಮಾನ್ಯ ಮುಖ್ಯಮಂತ್ರಿಯವರು ಉಡುಪಿ ಜಿಲ್ಲೆಯ ಪ್ರಗತಿ ಪರಿಶೀಲನಾ ಸಭೆಯನ್ನು ನಡೆಸುವ ಸಂದರ್ಭದಲ್ಲಿ ಶ್ರೀ ಆಸ್ಕರ್ ಫರ್ನಾಂಡೀಸ್, ಮಾನ್ಯ ರಾಜ್ಯಸಭಾ ಸದಸ್ಯರು ಹಾಗೂ ಕಾರ್ಖಾನೆಯ ಅಧ್ಯಕ್ಷರಾದ ಶ್ರೀ ಹೆಚ್. ಜಯಶೀಲ ಶೆಟ್ಟಿ ರವರು ದಕ್ಷಿಣ ಕನ್ನಡ ಸಹಕಾರ ಸಕ್ಕರೆ ಕಾರ್ಖಾನೆ ನಿ., ಬ್ರಹ್ಮಾವರ ಇದರ ಪುನ:ಶ್ಚೇತನಕ್ಕೆ ಸಂಬಂಧಿಸಿದಂತೆ ರೂ.30.00 ಕೋಟಿಗಳಷ್ಟು ಆರ್ಥಿಕ ಸಹಾಯವನ್ನು ನೀಡುವಂತೆ ಮಾನ್ಯ ಮುಖ್ಯಮಂತ್ರಿಯವರನ್ನು ವಿನಂತಿಸಿದಾಗ ಕಾರ್ಖಾನೆಯ ಪುನ:ಶ್ಚೇತನಕ್ಕೆ ಪ್ರಸ್ತುತ ಕಾರ್ಖಾನೆಯ ವ್ಯಾಪ್ತಿಯಲ್ಲಿ ಕಬ್ಬು ಬೆಳೆ ಬೆಳೆಯುವ ಕೆಲಸ ಆಗಬೇಕಾಗಿದೆ, ಅದನ್ನು ಆದ್ಯತೆ ಮೇಲೆ ಮಾಡುವಂತೆ ಸಲಹೆ ನೀಡಿರುತ್ತಾರೆ.<br><br>ಈ ಸಂಬಂಧ ದಿನಾಂಕ 23-01-2019 ರಂದು ಅಂದಿನ ಮಾನ್ಯ ಸಕ್ಕರೆ ಸಚಿವರ ಅಧ್ಯಕ್ಷತೆಯಲ್ಲಿ ಸಭೆ ನಡೆಸಲಾಗಿರುತ್ತದೆ. ಸದರಿ ಸಭೆಯಲ್ಲಿ ಈ ಕೆಳಕಂಡ ನಿರ್ಣಯಗಳನ್ನು ಕೈಗೊಳ್ಳಲಾಗಿದೆ.<br><br>1.ಕಾರ್ಖಾನೆಯ ಪುನಃಶ್ಚೇತನ ಸಂಬಂಧ ಮೆ\|\| ಮಿಟ್ಕಾನ್ ಕನ್ಸಲ್ಟೆನ್ಸಿ ಮತ್ತು ಇಂಜಿಯರಿಂಗ್ ಸರ್ವಿಸಸ್, ಪುಣೆ ಇವರು ನೀಡಿರುವ ವಿಸ್ತೃತ ಯೋಜನಾ ವರದಿಯ ಆಧಾರದ ಮೇಲೆ ಕಾರ್ಖಾನೆಯ Technical and Financial Viability ಕುರಿತಾಗಿ ಎಸ್.ನಿಜಲಿಂಗಪ್ಪ ಸಕ್ಕರೆ ಸಂಸ್ಥೆ ಬೆಳಗಾವಿ ಹಾಗೂ ಮೆ\|\| ಮಿಟ್ಕಾನ್ ಕನ್ಸಲ್ಟೆನ್ಸಿ ಮತ್ತು ಇಂಜಿನಿಯರಿಂಗ್ ಸರ್ವಿಸಸ್, ಪುಣೆ ಇವರು ಜಂಟಿಯಾಗಿ ಪರಿಶೀಲಿಸಿ ಮತ್ತೊಮ್ಮೆ ವರದಿ ಸಲ್ಲಿಸಲು ಸೂಚಿಸಲಾಯಿತು. |
| ಆ) | ಗ್ಲೋಬಲ್ ಟೆಂಡರ್ ಕರೆದು ಖಾಸಗಿಯವರಿಗೆ ಒಪ್ಪಿಸುವಲ್ಲಿ ಸರ್ಕಾರ ಕೈಗೊಂಡ ಕ್ರಮಗಳೇನು? | |

| | | |
|---|---|---|
| | | 2. ಈ ಸಂಬಂಧ ಜಿಲ್ಲಾಧಿಕಾರಿಗಳು ಮತ್ತು ಕಾರ್ಖಾನೆಯ ಆಡಳಿತ ಮಂಡಳಿಯು ಜವಾಬ್ದಾರಿ ತೆಗೆದುಕೊಂಡು ಕಾರ್ಖಾನೆಯ ಪುನಃಶ್ಚೇತನದ ಸಂಬಂಧ ಜಿಲ್ಲೆಯ ಎಲ್ಲಾ ರಾಜಕೀಯ ನಾಯಕರ ಮತ್ತು ರೈತ ಮುಖಂಡರ ಜೊತೆ ಸಭೆಯನ್ನು ನಡೆಸಿ ಷೇರು ಬಂಡವಾಳ ಹೆಚ್ಚಿಸುವ ಸಂಬಂಧ ಹಾಗೂ ಸಹಕಾರಿ ಸಂಸ್ಥೆಗಳಿಂದ ಆರ್ಥಿಕ ನೆರವು ಸಂಗ್ರಹಿಸುವ ಬಗ್ಗೆ ಸೂಕ್ತ ನಿರ್ಣಯ ಕೈಗೊಂಡು ಸರ್ಕಾರಕ್ಕೆ ವರದಿಸುವುದು.<br>3. ಕಾರ್ಖಾನೆಯ ಪುನಃಶ್ಚೇತನಕ್ಕಾಗಿ ತನ್ನ ಪಾಲಿನ ಷೇರು ಹಣವನ್ನು ಸಂಗ್ರಹಿಸತಕ್ಕದ್ದು, ಆ ನಂತರವೇ ಸರ್ಕಾರವು ತನ್ನ ಪಾಲಿನ ಆರ್ಥಿಕ ನೆರವನ್ನು ನೀಡುವ ಬಗ್ಗೆ ಪರಿಶೀಲಿಸುವುದಾಗಿ ನಿರ್ಣಯಿಸಲಾಯಿತು.<br>ಮಾನ್ಯ ಸಕ್ಕರೆ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಿರ್ಣಯಗಳಂತೆ ಕ್ರಮ ಕೈಗೊಂಡು ಅನುಪಾಲನೆ ನೀಡುವಂತೆ ಕಾರ್ಖಾನೆಯನ್ನು ದಿನಾಂಕ 08.02.2019 ರಂದು ವ್ಯವಸ್ಥಾಪಕ ನಿರ್ದೇಶಕರು, ಬ್ರಹ್ಮಾವರ ಸಹಕಾರಿ ಸಕ್ಕರೆ ಕಾರ್ಖಾನೆ ಇವರನ್ನು ಕೋರಲಾಗಿತ್ತು. ಈ ಸಂಬಂಧ ಕಾರ್ಖಾನೆಯು ದಿನಾಂಕ 15.06.2019 ರಂದು ಪ್ರಸ್ತಾವನೆಯೊಂದನ್ನು ಸಲ್ಲಿಸಿ, ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಯ ಸಹಕಾರಿ ಸಂಸ್ಥೆಗಳಿಂದ ರೂ.10.00 ಕೋಟಿಗಳವರೆಗೆ ಷೇರು ಬಂಡವಾಳ ಸಂಗ್ರಹಿಸುವ ಬಗ್ಗೆ ಇರುವ ಅವಕಾಶಗಳನ್ನು ಪ್ರಸ್ತಾಪಿಸುತ್ತಾ, ಇನ್ನುಳಿದ ಎರಡು ನಿರ್ಣಯಗಳಿಗೆ ಕ್ರಮ ಕೈಗೊಳ್ಳಲು ಸಾಧ್ಯವಾಗದಿರುವುದನ್ನು ವಿವರಿಸಿ ಸರ್ಕಾರದಿಂದ ರೂ.30.00 ಕೋಟಿಗಳ ಆರ್ಥಿಕ ನೆರವು ನೀಡುವಂತೆ ವಿನಂತಿಸಿರುತ್ತಾರೆ. ಈ ಪ್ರಸ್ತಾವನೆ ಪ್ರಾಪ್ತವಾದ ದಿನದಂದೇ ಅಂದರೆ, ದಿನಾಂಕ 17.06.2019ರ ದಿನಾಂಕವುಳ್ಳ ಮತ್ತೊಂದು ಪ್ರಸ್ತಾವನೆಯಲ್ಲಿ ಕಾರ್ಖಾನೆಯು LROT (Lease Rehabilitate Operate and Transfer) ಆಧಾರದ ಮೇಲೆ ಖಾಸಗಿಯವರಿಗೆ ಗುತ್ತಿಗೆ ನೀಡಲು ಕ್ರಮ ಕೈಗೊಳ್ಳಬೇಕೆಂದು ಕೋರಿರುತ್ತದೆ.<br>ಕಾರ್ಖಾನೆಯು ಈ ಸಂಬಂಧ ಸಕಾರಾತ್ಮಕ ಕ್ರಮಗಳನ್ನು ಕೈಗೊಳ್ಳದ ಕಾರಣ ಕಾರ್ಖಾನೆಯ ಪುನಶ್ಚೇತನದ ಸಂಬಂಧ ಸರ್ಕಾರದಿಂದ ಅನುದಾನ ನೀಡುವ ಪ್ರಮೇಯ ಉದ್ಭವಿಸುವುದಿಲ್ಲ.<br>ಆರ್ಥಿಕ ಸಂಕಷ್ಟದಿಂದ ಸ್ಥಗಿತಗೊಂಡಿರುವ ಸಹಕಾರಿ ಸಕ್ಕರೆ ಕಾರ್ಖಾನೆಗಳನ್ನು ಖಾಸಗಿಯವರಿಗೆ ದೀರ್ಘಾವಧಿ ಮೇಲೆ ಗುತ್ತಿಗೆ ನೀಡುವುದರ ಮೂಲಕ ಪುನಶ್ಚೇತನಗೊಳಿಸುವುದು ಸರ್ಕಾರದ ಪ್ರಸ್ತುತ ನೀತಿಯಾಗಿರುತ್ತದೆ. |

...3

| | | |
|---|---|---|
| | | ಕಾರ್ಖಾನೆಯ ಮಾಜಿ ಕಾರ್ಮಿಕರ ಸಂಘವು ಕಾರ್ಖಾನೆಯು ಕಾರ್ಮಿಕರಿಗೆ ಪಾವತಿಸಬೇಕಾಗಿರುವ ಬಾಕಿ ಮೊತ್ತದ ಸಂಬಂಧ ಕಾರ್ಖಾನೆಯ ವಿರುದ್ಧ ಗೌರವಾನ್ವಿತ ಉಚ್ಚ ನ್ಯಾಯಾಲಯ, ಬೆಂಗಳೂರು ಇವರಲ್ಲಿ ರಿಟ್ ಅರ್ಜಿ ಸಂಖ್ಯೆ.23519/2014ನ್ನು ದಾಖಲಿಸಿರುತ್ತಾರೆ. ಸದರಿ ರಿಟ್ ಅರ್ಜಿಯ ಕುರಿತು ಗೌರವಾನ್ವಿತ ಉಚ್ಚ ನ್ಯಾಯಾಲಯವು ದಿನಾಂಕ 25.04.2016 ರಂದು ಮಧ್ಯಂತರ ಆದೇಶ ನೀಡಿ ಕಾರ್ಖಾನೆಯ ಸ್ಥಿರಾಸ್ತಿ ಹಾಗೂ ಚರಾಸ್ತಿಗಳನ್ನು ಮಾರಾಟ ಮಾಡಬಾರದಾಗಿ ಯಥಾಸ್ಥಿತಿಯನ್ನು ಕಾಪಾಡುವಂತೆ ಆದೇಶಿಸಲಾಗಿದೆ. ಈ ಹಿನ್ನೆಲೆಯಲ್ಲಿ ಕಾರ್ಖಾನೆಯ ಜಮೀನನ್ನು ಮಾರಾಟ ಮಾಡುವುದಾಗಲೀ ಅಥವಾ ಗುತ್ತಿಗೆ ನೀಡುವುದಾಗಲೀ ಸಾಧ್ಯವಾಗುವುದಿಲ್ಲ. ಆದಾಗ್ಯೂ ಈ ಕಾರ್ಖಾನೆಯನ್ನು ಖಾಸಗಿಯವರಿಗೆ ಗುತ್ತಿಗೆ ನೀಡುವ ಬಗ್ಗೆ ಎಲ್ಲಾ ಸಾಧಕ-ಬಾಧಕಗಳನ್ನು ಪರಿಶೀಲಿಸಲಾಗುತ್ತಿದೆ. |

ಸಿಐ 196 ಸಿಓಎಫ್ 2020

ಅರಬೈಲ್ ಶಿವರಾಮ್ ಹೆಬ್ಬಾರ
(ಕಾರ್ಮಿಕ ಮತ್ತು ಸಕ್ಕರೆ ಸಚಿವರು)

ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ :1383
ಮಾನ್ಯ ಸದಸ್ಯರ ಹೆಸರು :ಶ್ರೀ ನಿರಂಜನ್ ಕುಮಾರ್ ಸಿ.ಎಸ್ (ಗುಂಡ್ಲುಪೇಟೆ)
ಉತ್ತರಿಸಬೇಕಾದ ದಿನಾಂಕ :24.09.2020
ಉತ್ತರಿಸುವ ಸಚಿವರು :ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
| --- | --- | --- |
| ಅ | ಗುಂಡ್ಲುಪೇಟೆ ಮತಕ್ಷೇತ್ರದ ವ್ಯಾಪ್ತಿಯಲ್ಲಿ ಕಾರ್ಯನಿರ್ವಸುತ್ತಿರುವ ಪ್ರಾಥಮಿಕ ಆರೋಗ್ಯ ಕೇಂದ್ರಗಳು ಎಷ್ಟು; ಅವು ಯಾವುವು; (ಸಂಪೂರ್ಣ ವಿವರ ನೀಡುವುದು) | ಗುಂಡ್ಲುಪೇಟೆ ಮತಕ್ಷೇತ್ರದ ವ್ಯಾಪ್ತಿಯಲ್ಲಿ 19 ಪ್ರಾಥಮಿಕ ಆರೋಗ್ಯ ಕೇಂದ್ರಗಳು ಕಾರ್ಯನಿರ್ವಹಿಸುತ್ತಿವೆ. ವಿವರವನ್ನು **ಅನುಬಂಧದಲ್ಲಿ ನೀಡಲಾಗಿದೆ.** |
| ಆ | ತಾಲ್ಲೂಕಿನ ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಮೇಲ್ದರ್ಜೆಗೇರಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಇಲ್ಲ. |
| ಇ | ಹಾಗಿದ್ದಲ್ಲಿ, ಸದರಿ ಆರೋಗ್ಯ ಕೇಂದ್ರಗಳನ್ನು ಮೇಲ್ದರ್ಜೆಗೇರಿಸಲು ಸರ್ಕಾರವು ಮೀಸಲಿರಿಸಿರುವ ಅನುದಾನ ಎಷ್ಟು; ಹಾಗೂ ಯಾವ ಕಾಲಮಿತಿಯೊಳಗೆ ಮೇಲ್ದರ್ಜೆಗೇರಿಸಲಾಗುವುದು; | 2011ರ ಜನಗಣತಿಯ ಪ್ರಕಾರ ಗುಂಡ್ಲುಪೇಟೆ ತಾಲ್ಲೂಕಿನ ಗ್ರಾಮೀಣ ಜನಸಂಖ್ಯೆ:-1,94,965 ಇದ್ದು, ಜನಸಂಖ್ಯೆಗನುಗುಣವಾಗಿ 10 ಪ್ರಾಥಮಿಕ ಆರೋಗ್ಯ ಕೇಂದ್ರಗಳ ಸ್ಥಾಪನೆಗೆ ಅವಕಾಶವಿದ್ದು, ಪ್ರಸ್ತುತ 19 ಪ್ರಾಥಮಿಕ ಆರೋಗ್ಯ ಕೇಂದ್ರಗಳು ಕಾರ್ಯನಿರ್ವಹಿಸುತ್ತಿವೆ.<br><br>ಗುಂಡ್ಲುಪೇಟೆ ತಾಲ್ಲೂಕಿನಲ್ಲಿ 2 ಸಮುದಾಯ ಆರೋಗ್ಯ ಕೇಂದ್ರ ಮತ್ತು 100 ಹಾಸಿಗೆಗಳ ಸಾರ್ವಜನಿಕ ಆಸ್ಪತ್ರೆ ಮತ್ತು 60 ಹಾಸಿಗೆಗಳ ತಾಯಿ ಮತ್ತು ಮಕ್ಕಳ ಆಸ್ಪತ್ರೆ ಕಾರ್ಯನಿರ್ವಹಿಸುತ್ತಿದೆ. |
| ಈ | ಇಲ್ಲದಿದ್ದಲ್ಲಿ, ಕಾರಣಗಳೇನು? (ವಿವರ ಕೊಡಿ) | |

ಆಕುಕ 110 ಎಸ್‌ಬಿವಿ 2020

(ಬಿ. ಶ್ರೀರಾಮುಲು)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು

ಕರ್ನಾಟಕ ವಿಧಾನ ಸಭೆಯ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1383ಕ್ಕೆ ಅನುಬಂಧ

| ಗುಂಡ್ಲುಪೇಟೆ ತಾಲ್ಲೂಕಿನಲ್ಲಿರುವ ಪ್ರಾಥಮಿಕ ಆರೋಗ್ಯ ಕೇಂದ್ರಗಳು ಈ ಕೆಳಗಿನಂತಿವೆ. | |
|---|---|
| ಕ್ರ.ಸಂ. | ಗುಂಡ್ಲುಪೇಟೆ ತಾಲ್ಲೂಕು |
| 1 | ಬಾಚಹಳ್ಳಿ |
| 2 | ಬನ್ನಿತಾಳಪುರ |
| 3 | ಬರಗಿ |
| 4 | ಬಲಚವಾಡಿ |
| 5 | ಬೊಮ್ಮಲಾಪುರ |
| 6 | ಹಂಗಳ |
| 7 | ಹಸಗುಲಿ |
| 8 | ಹೆಗ್ಗಡಹಳ್ಳಿ |
| 9 | ಹೊರೆಯಾಲ |
| 10 | ಹುಂಡೀಪುರ |
| 11 | ಕಗ್ಗಳದ ಹುಂಡಿ |
| 12 | ಕೊಡಸೋಗೆ |
| 13 | ಮಂಗಲ |
| 14 | ನೇನೆಕಟ್ಟೆ |
| 15 | ಪಡಗೂರು |
| 16 | ರಂಗನಾಥಪುರ |
| 17 | ತೆರಕಣಾಂಬಿ |
| 18 | ಬೊಮ್ಮನಹಳ್ಳಿ |
| 19 | ಮಾದಪಟ್ಟಣ |

## ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1389 |
| ಸದಸ್ಯರ ಹೆಸರು | : | ಶ್ರೀ ಪರಮೇಶ್ವರ ನಾಯಕ್ ಪಿ.ಟಿ (ಹಡಗಲಿ) |
| ಉತ್ತರಿಸಬೇಕಾದ ದಿನಾಂಕ | : | 24-09-2020 |
| ಉತ್ತರಿಸುವ ಸಚಿವರು | : | ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಸರ್ಕಾರಿ ಶಾಲೆಗಳ ಬಿಸಿಯೂಟ ವಿಭಾಗದಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅಡುಗೆ ಸಹಾಯಕರಿಗೆ ಲಾಕ್ ಡೌನ್ ಸಂದರ್ಭದಲ್ಲಿ ಸರಿಯಾಗಿ ವೇತನಸಿಗದೇ ತೊಂದರೆ ಅನುಭವಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಸರ್ಕಾರ ತೆಗೆದುಕೊಂಡ ಕ್ರಮದ ಬಗ್ಗೆ ಮಾಹಿತಿ ತಿಳಿಸುವುದು; | ಮಧ್ಯಾಹ್ನ ಉಪಹಾರ ಯೋಜನೆಯಡಿ ಕರ್ತವ್ಯ ನಿರ್ವಹಿಸುತ್ತಿರುವ ಅಡುಗೆ ಸಹಾಯಕರಿಗೆ ಪ್ರತಿ ಆರ್ಥಿಕ ವರ್ಷದಲ್ಲಿ 10 ತಿಂಗಳ ಗೌರವ ಸಂಭಾವನೆಯನ್ನು (ಜೂನ್ ಮಾಹೆಯಿಂದ ಮಾರ್ಚ್ ವರೆಗೆ) ಮಾತ್ರ ಪಾವತಿಸಲಾಗುತ್ತದೆ. ಏಪ್ರಿಲ್ ಮತ್ತು ಮೇ ತಿಂಗಳಲ್ಲಿ ಶಾಲೆಗಳಿಗೆ ಬೇಸಿಗೆ ರಜೆ ಇರುವ ಕಾರಣ ಶಾಲೆಗಳು ಪೂರ್ಣಾವಧಿಯಲ್ಲಿ ನಡೆಯುವುದಿಲ್ಲ. ಈ ಹಿನ್ನೆಲೆಯಲ್ಲಿ ಅಡುಗೆ ಸಹಾಯಕರಿಗೆ ಏಪ್ರಿಲ್ ಮತ್ತು ಮೇ ತಿಂಗಳಲ್ಲಿ ಯಾವುದೇ ಸಂಭಾವನೆಯನ್ನು ಪಾವತಿಸುವುದಿಲ್ಲ. ಆದುದರಿಂದ ಏಪ್ರಿಲ್ ಮತ್ತು ಮೇ-2020ರ ಲಾಕ್ ಡೌನ್ ಅವಧಿಯಲ್ಲಿ ಅಡುಗೆ ಸಹಾಯಕರಿಗೆ ಗೌರವ ಸಂಭಾವನೆ ಪಾವತಿಸುವ ಪ್ರಶ್ನೆಯೇ ಉದ್ಭವಿಸುವುದಿಲ್ಲ.<br>ಉಳಿದಂತೆ 2020-21ನೇ ಸಾಲಿನಲ್ಲಿ ಜೂನ್, ಜುಲೈ ಮತ್ತು ಆಗಸ್ಟ್-2020ರ ಮಾಹೆಗಳಿಗೆ ಮಧ್ಯಾಹ್ನ ಉಪಹಾರ ಯೋಜನೆಯಡಿ ಕರ್ತವ್ಯ ನಿರ್ವಹಿಸುತ್ತಿರುವ 1,17,999 ಅಡುಗೆ ಸಿಬ್ಬಂದಿಗಳಿಗೆ 03 ತಿಂಗಳ ಸಂಭಾವನೆ **ರೂ 9345.76 ಲಕ್ಷಗಳನ್ನು** ಸರ್ಕಾರದ ಆದೇಶ ಸಂಖ್ಯೆ: ಇಪಿ 20 ಎಂಎಂಎಸ್ ದಿನಾಂಕ: 20-08-2020 ರನ್ವಯ ರಾಜ್ಯ ಎಲ್ಲಾ ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡಲಾಗಿದೆ. |
| ಆ) | ವೇತನ ನೀಡಲು ಬಾಕಿ ಇದೆಯೇ? (ತಾಲ್ಲೂಕುವಾರು ಮಾಹಿತಿ ನೀಡುವುದು) | 2020-21ನೇ ಸಾಲಿನಲ್ಲಿ ಸರ್ಕಾರದಿಂದ ಎಲ್ಲಾ ಜಿಲ್ಲಾಪಂಚಾಯತಿಗಳಿಗೆ ಜೂನ್, ಜುಲೈ ಮತ್ತು ಆಗಸ್ಟ್-2020ರ ಮಾಹೆಗಳಿಗೆ ಅಡುಗೆ ಸಹಾಯಕರ ಸಂಭಾವನೆಗೆಯನ್ನು ಪಾವತಿಸಲು ಅಗತ್ಯವಿರುವ ಅನುದಾನವನ್ನು ಈಗಾಗಲೇ ಬಿಡುಗಡೆ ಮಾಡಲಾಗಿದೆ.<br>ಈ ಪೈಕಿ 99 ತಾಲ್ಲೂಕುಗಳಲ್ಲಿ ಅಡುಗೆ ಸಹಾಯಕರಿಗೆ ಸಂಭಾವನೆಯನ್ನು ಪಾವತಿಸಲಾಗಿದೆ.<br>ಬಾಕಿ ಉಳಿದಿರುವ 128 ತಾಲ್ಲೂಕುಗಳಲ್ಲಿ ಅಡುಗೆ ಸಿಬ್ಬಂದಿಗಳಿಗೆ ಸಂಭಾವನೆಯನ್ನು ಪಾವತಿಸಲು ಕ್ರಮವಹಿಸಲಾಗಿದ್ದು, ಈ ಸಂಬಂಧ ತಾಲ್ಲೂಕುವಾರು ಮಾಹಿತಿಯನ್ನು ಅನುಬಂಧಿಸಿದೆ. **(ಅನುಬಂಧ-1)** |

ಇಪಿ 43 ಎಂಎಂಎಸ್ 2020

(ಎಸ್. ಸುರೇಶ್ ಕುಮಾರ್)
ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಸಚಿವರು

## ಅನುಬಂಧ-1

## 2020-21ನೇ ಸಾಲಿನಲ್ಲಿ ಅಡುಗೆ ಸಹಾಯಕರ ಸಂಭಾವನೆಯನ್ನು ಪಾವತಿಸಲು ಕ್ರಮವಹಿಸಲಾಗುತ್ತಿರುವ ತಾಲ್ಲೂಕುಗಳ ಮಾಹಿತಿ

| ಕ್ರಸಂ. | ಜಿಲ್ಲೆಯ ಹೆಸರು | ಕ್ರಸಂ. | ತಾಲ್ಲೂಕಿನ ಹೆಸರು | ಅಡುಗೆ ಸಿಬ್ಬಂದಿಗಳ ಸಂಭಾವನೆ ಪಾವತಿ ವಿವರ |
|---|---|---|---|---|
| 1 | ಬಾಗಲಕೋಟೆ | 1. | ಬಾದಾಮಿ | ಬಾಗಲಕೋಟೆ ಜಿಲ್ಲಾ ಪಂಚಾಯತ್ ಕಛೇರಿಯಿಂದ ತಾಲ್ಲೂಕುವಾರು ಅನುದಾನ ಬಿಡುಗಡೆ ಮಾಡಲಾಗಿದೆ. |
| | | 2. | ಬಾಗಲಕೋಟೆ | |
| | | 3. | ಬೀಳಗಿ | |
| | | 4. | ಹುನಗುಂದ | |
| | | 5. | ಜಮಖಂಡಿ | |
| | | 6. | ಮುಧೋಳ | |
| 2 | ಬಳ್ಳಾರಿ | 7. | ಬಳ್ಳಾರಿ ಪೂರ್ವ | ಬಳ್ಳಾರಿ ಜಿಲ್ಲಾ ಪಂಚಾಯತ್ ಕಛೇರಿಯಿಂದ ಅನುದಾನ ಬಿಡುಗಡೆಯಾಗಿದ್ದು, ತಾಲ್ಲೂಕು ಪಂಚಾಯತ್ ಹಂತದಲ್ಲಿ ಕೆ-2 ನಲ್ಲಿ ಬಿಲ್ಲು ಸಿದ್ಧಪಡಿಸಿ ಟ್ರೆಜರಿಗೆ ಸಲ್ಲಿಸಲು ಕ್ರಮ ವಹಿಸಲಾಗುತ್ತಿದೆ |
| | | 8. | ಹಡಗಲಿ | |
| | | 9. | ಹಗರಿಬೊಮ್ಮನಹಳ್ಳಿ | |
| | | 10. | ಹೊಸಪೇಟೆ | |
| | | 11. | ಕೂಡ್ಲಗಿ | |
| | | 12. | ಸಂಡೂರು | |
| | | 13. | ಶಿರಗುಪ್ಪ | |
| | | 14. | ಬಳ್ಳಾರಿ ಪಶ್ಚಿಮ | |
| 3 | ಬೆಳಗಾವಿ | 15. | ಖಾನಾಪುರ | ತಾಲ್ಲೂಕು ಹಂತದಲ್ಲಿ ಸಹಾಯಕ ನಿರ್ದೇಶಕರು, ಅ.ದಾ. ಬಿಲ್ಲುಗಳನ್ನು ತಯಾರಿಸಿ ಖಜಾನೆಗೆ ಸಲ್ಲಿಸಿರುತ್ತಾರೆ. |
| | | 16. | ಚಿಕ್ಕೋಡಿ | ತಾಲ್ಲೂಕು ಹಂತದಲ್ಲಿ ಸಂಭಾವನೆ ಕಾರ್ಯ ಪ್ರಗತಿಯಲ್ಲಿದೆ |
| 4 | ಬೆಂಗಳೂರು ಗ್ರಾಮಾಂತರ | 17. | ನೆಲಮಂಗಲ | ತಾಲ್ಲೂಕು ಹಂತದಲ್ಲಿ ಖಜಾನೆ-2 ತಂತ್ರಾಂಶದ ಮೂಲಕ ಬಿಲ್ಲುಗಳ ತಯಾರಿ ಕಾರ್ಯ ಪ್ರಗತಿಯಲ್ಲಿದೆ. |
| | | 18. | ದೇವನಹಳ್ಳಿ | |
| | | 19. | ದೊಡ್ಡಬಳ್ಳಾಪುರ | |
| | | 20. | ಹೊಸಕೋಟೆ | |
| 5 | ಬೆಂಗಳೂರು ನಗರ | 21. | ಉತ್ತರ | ತಾಲ್ಲೂಕು ಹಂತದಲ್ಲಿ ಖಜಾನೆ-2 ತಂತ್ರಾಂಶದ ಮೂಲಕ ಬಿಲ್ಲುಗಳ ತಯಾರಿ ಕಾರ್ಯ ಪ್ರಗತಿಯಲ್ಲಿದೆ. |
| | | 22. | ಯಲಹಂಕ | |
| | | 23. | ದಕ್ಷಿಣ | |
| | | 24. | ಪೂರ್ವ | |
| | | 25. | ಆನೇಕಲ್ | |
| 6 | ಬೀದರ್ | 26. | ಔರಾದ್ | ಜಿಲ್ಲಾ ಪಂಚಾಯತ್ ಹಂತದಲ್ಲಿ ಅನುದಾನ ಬಿಡುಗಡೆಯಾಗಿದ್ದು, ತಾಲ್ಲೂಕು ಪಂಚಾಯತ್ ಹಂತದಲ್ಲಿ ಕೆ-2 ಡಿ.ಎಸ್.ಸಿ. ಕೀ ಪಡೆಯಲಾಗುತ್ತಿದ್ದು, ವೇತನ ಬಿಡುಗಡೆ ಮಾಡಲು ಸಮಯ ಹಿಡಿದಿರುತ್ತದೆ. ಒಂದು ವಾರದೊಳಗೆ ಎಲ್ಲಾ ಅಡುಗೆ ಸಿಬ್ಬಂದಿಯವರ ತಾಲ್ಲೂಕುವಾರು ವೇತನ ಜಮೆ ಮಾಡಲಾಗುವುದು. |
| | | 27. | ಬಸವಕಲ್ಯಾಣ | |
| | | 28. | ಭಾಲ್ಕಿ | |
| | | 29. | ಬೀದರ್ | |
| | | 30. | ಹುಮ್ನಾಬಾದ್ | |

| ಕ್ರ.ಸಂ. | ಜಿಲ್ಲೆಯ ಹೆಸರು | ಕ್ರ.ಸಂ. | ತಾಲ್ಲೂಕಿನ ಹೆಸರು | ಅಡುಗೆ ಸಿಬ್ಬಂದಿಗಳ ಸಂಭಾವನೆ ಪಾವತಿ ವಿವರ |
|---|---|---|---|---|
| 7 | ಚಾಮರಾಜನಗರ | 31. | ಚಾಮರಾಜನಗರ | ತಾಲ್ಲೂಕು ಹಂತದಲ್ಲಿ ಬಿಲ್ಲುಗಳನ್ನು ತಯಾರಿಸಿ ಖಜಾನೆಗೆ ಸಲ್ಲಿಸಲಾಗಿದೆ. |
| | | 32. | ಗುಂಡ್ಲುಪೇಟೆ | |
| | | 33. | ಕೊಳ್ಳೇಗಾಲ | |
| | | 34. | ಯಳಂದೂರು | |
| | | 35. | ಹನೂರು | |
| 8 | ಚಿಕ್ಕಮಗಳೂರು | 36. | ತರೀಕೆರೆ | ಡಿ.ಎಸ್.ಸಿ ಕಿ ತಾಂತ್ರಿಕ ಸಮಸ್ಯೆ ಬಗೆಹರಿಸಲಾಗುತ್ತಿದ್ದು, ತಾಂತ್ರಿಕ ಸಮಸ್ಯೆ ಬಗೆಹರಿಸಿ ಸಂಭಾವನೆ ಪಾವತಿಸಲು ಕ್ರಮವಹಿಸಲಾಗುವುದು. |
| 9 | ದಕ್ಷಿಣ ಕನ್ನಡ | 37. | ಬಂಟ್ವಾಳ | ತಾಲ್ಲೂಕು ಹಂತದಲ್ಲಿ ಬಿಲ್ಲುಗಳನ್ನು ತಯಾರಿಸಿ ಖಜಾನೆಗೆ ಸಲ್ಲಿಸಲಾಗಿದೆ. |
| | | 38. | ಬೆಳ್ತಂಗಡಿ | |
| | | 39. | ಮಂಗಳೂರು ಉತ್ತರ | |
| | | 40. | ಪುತ್ತೂರು | |
| | | 41. | ಸುಳ್ಯ | |
| | | 42. | ಮಂಗಳೂರು ದಕ್ಷಿಣ | |
| | | 43. | ಮೂಡಿಗೆರೆ | |
| 10 | ದಾವಣಗೆರೆ | 44. | ಹರಿಹರ | ಬಿಲ್ಲನ್ನು ತಯಾರಿಸಿದ್ದು, ವೇತನ ಬಟವಾಡೆ ಅಧಿಕಾರಿಯಾದ ಕಾರ್ಯನಿರ್ವಾಹಕ ಅಧಿಕಾರಿಗಳು ತಾ.ಪಂ ರವರ ವರ್ಗಾವಣೆಯಿಂದ ಬಾಕಿ ಇದೆ. |
| 11 | ಧಾರವಾಡ | 45. | ಧಾರವಾಡ | ತಾಲ್ಲೂಕು ಹಂತದಲ್ಲಿ ಖಜಾನೆ-2 ಮೂಲಕ ಸಂಭಾವನೆ ಜಮಾ ಮಾಡಲು ಕ್ರಮ ವಹಿಸಲಾಗಿದೆ. |
| | | 46. | ಹುಬ್ಬಳ್ಳಿ | |
| | | 47. | ಕಲಘಟಗಿ | |
| | | 48. | ಕುಂದಗೋಳ | |
| | | 49. | ನವಲಗುಂದ | |
| | | 50. | ಹುಬ್ಬಳ್ಳಿ ಗ್ರಾಮಾಂತರ | |
| | | 51. | ಧಾರವಾಡ ನಗರ | |
| 12 | ಹಾಸನ | 52. | ಆಲೂರು | ಜಿಲ್ಲಾ ಹಂತದಿಂದ ತಾಲ್ಲೂಕು ಹಂತಕ್ಕೆ ಅನುದಾನ ಬಿಡುಗಡೆ ಮಾಡಲು ಕ್ರಮವಹಿಸಲಾಗುತ್ತಿದೆ. |
| | | 53. | ಅರಕಲಗೂಡು | |
| | | 54. | ಅರಸೀಕೆರೆ | |
| | | 55. | ಬೇಲೂರು | |
| | | 56. | ಚನ್ನರಾಯಪಟ್ಟಣ | |
| | | 57. | ಹಾಸನ | |
| | | 58. | ಹೊಳೆನರಸೀಪುರ | |
| | | 59. | ಸಕಲೇಶಪುರ | |
| 13 | ಹಾವೇರಿ | 60. | ಶಿಗ್ಗಾಂವಿ | ಈ ತಾಲ್ಲೂಕಿನಲ್ಲಿ 47 ಅಡುಗೆ ಸಿಬ್ಬಂದಿ ಸಂಭಾವನೆ ಪಾವತಿ ಬಾಕಿ ಇದ್ದು, ಸಂಭಾವನೆ ಪಾವತಿಗೆ ಕ್ರಮವಹಿಸಲಾಗುತ್ತಿದೆ. |

| ಕ್ರಸಂ. | ಜಿಲ್ಲೆಯ ಹೆಸರು | ಕ್ರಸಂ. | ತಾಲ್ಲೂಕಿನ ಹೆಸರು | ಅಡುಗೆ ಸಿಬ್ಬಂದಿಗಳ ಸಂಭಾವನೆ ಪಾವತಿ ವಿವರ |
|---|---|---|---|---|
| 14 | ಕಲಬುರ್ಗಿ | 61. | ಅಫ್ಜಲ್‌ಪುರ | ಜಿಲ್ಲಾ ಪಂಚಾಯತ್ ಕಛೇರಿಯಿಂದ ತಾಲ್ಲೂಕುವಾರು ಅನುದಾನ ಬಿಡುಗಡೆ ಮಾಡಲಾಗಿದ್ದು, ಕೆ-2 ಮೂಲಕ ಬಿಲ್ಲುಗಳ ತಯಾರಿ ಕಾರ್ಯ ಪ್ರಗತಿಯಲ್ಲಿದೆ. |
| | | 62. | ಆಳಂದ | |
| | | 63. | ಚಿಂಚೋಳಿ | |
| | | 64. | ಚಿತ್ತಾಪುರ | |
| | | 65. | ಕಲಬುರ್ಗಿ ಉತ್ತರ | |
| | | 66. | ಕಲಬುರ್ಗಿ ದಕ್ಷಿಣ | |
| | | 67. | ಜೇವರ್ಗಿ | |
| | | 68. | ಸೇಡಂ | |
| 15 | ಕೋಲಾರ | 69. | ಬಂಗಾರಪೇಟೆ | ತಾಲ್ಲೂಕು ಹಂತದಲ್ಲಿ ಅಡುಗೆ ಸಿಬ್ಬಂದಿ ವೇತನದ ಬಿಲ್ಲು ಖಜಾನೆಗೆ ಸಲ್ಲಿಸಲಾಗಿರುತ್ತದೆ. |
| | | 70. | ಕೋಲಾರ | ಅಡುಗೆ ಸಿಬ್ಬಂದಿಗಳ ಕೊರತೆ, ಡಿ.ಎಸ್.ಸಿ ಹೊಸದಾಗಿ ಮಾಡಿಸಿದಕ್ಕಾಗಿ ಮತ್ತು ಬ್ಯಾಂಕ್‌ಗಳು ಮರ್ಜ್ ಆದ ಕಾರಣ ಅಡುಗೆ ಸಿಬ್ಬಂದಿಗಳ ಹೊಸ ಖಾತೆ ಸಂಖ್ಯೆಗಳ ರೆಸಿಪಿಯೆಂಟ್ ಐಡಿಗಳನ್ನುಸೃಜಿಸಲಾಗುತ್ತಿರುತ್ತದೆ. ಮುಂದಿನ ಶುಕ್ರವಾರದ ಒಳಗೆ ಸಂಭಾವನೆ ಪಾವತಿಸಲಾಗುವುದು. |
| | | 71. | ಮಾಲೂರು | ತಾಲ್ಲೂಕು ಹಂತದಲ್ಲಿ ಸಂಭಾವನೆ ಪಾವತಿ ಕಾರ್ಯ ಪ್ರಗತಿಯಲ್ಲಿರುತ್ತದೆ. |
| | | 72. | ಮುಳಬಾಗಿಲು | |
| | | 73. | ಶ್ರೀನಿವಾಸಪುರ | |
| | | 74. | ಕೆ ಜಿ ಎಫ್ | |
| 16 | ಕೊಪ್ಪಳ | 75. | ಗಂಗಾವತಿ | ತಾಲ್ಲೂಕುಗಳಲ್ಲಿ ಈಗಾಗಲೇ ಕೆ-2 ಬಿಲ್ಲು ತಯಾರಿಸಲಾಗುತ್ತಿದ್ದು, ಬಿಲ್ಲುಗಳ ಮೇಲು ರುಜುಗಾಗಿ ಜಿಲ್ಲಾ ಹಂತಕ್ಕೆ ಬಿಲ್ಲುಗಳನ್ನು ಕಳುಹಿಸಲಾಗಿರುತ್ತದೆ. ಮೇಲು ರುಜು ಪ್ರಕ್ರಿಯೇ ಜಾರಿಯಲ್ಲಿದೆ, ಒಂದು ವಾರದಲ್ಲಿ ಎಲ್ಲಾ ಅಡುಗೆ ಸಿಬ್ಬಂದಿಗಳ ಸಂಭಾವನೆಯನ್ನು ಪೂರ್ಣಗೊಳಿಸಲಾಗುವುದು. |
| | | 76. | ಕೊಪ್ಪಳ | |
| | | 77. | ಕುಷ್ಟಗಿ | |
| | | 78. | ಯಲಬುರ್ಗಾ | |
| 17 | ಮಂಡ್ಯ | 79. | ಕೃಷ್ಣರಾಜಪುರ | ತಾಲ್ಲೂಕುಗಳಿಗೆ ಅನುದಾನ ಬಿಡುಗಡೆಗೆ ಕ್ರಮವಹಿಸಲಾಗಿದೆ. |
| | | 80. | ಮದ್ದೂರು | |
| | | 81. | ಮಳವಳ್ಳಿ | |
| | | 82. | ಮಂಡ್ಯ ದಕ್ಷಿಣ | |
| | | 83. | ನಾಗಮಂಗಲ | |
| | | 84. | ಪಾಂಡವಪುರ | |
| | | 85. | ಶ್ರೀರಂಗಪಟ್ಟಣ | |
| | | 86. | ಮಂಡ್ಯ ಉತ್ತರ | |
| 18 | ಮೈಸೂರು | 87. | ಕೆ ಆರ್ ನಗರ | ತಾಲ್ಲೂಕುವಾರು ಅನುದಾನ ಬಿಡುಗಡೆಗೆ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್ ರವರ ಅನುಮೋದನೆಗೆ ಕಡತ ಸಲ್ಲಿಸಲಾಗಿದೆ. |
| | | 88. | ಹೆಚ್ ಡಿ ಕೋಟೆ | |
| | | 89. | ಹುಣಸೂರು | |
| | | 90. | ಮಂಡ್ಯ ಉತ್ತರ | |
| | | 91. | ಮೈಸೂರು ಗ್ರಾಮಾಂತರ | |

| ಕ್ರ.ಸಂ. | ಜಿಲ್ಲೆಯ ಹೆಸರು | ಕ್ರ.ಸಂ. | ತಾಲ್ಲೂಕಿನ ಹೆಸರು | ಅಡುಗೆ ಸಿಬ್ಬಂದಿಗಳ ಸಂಭಾವನೆ ಪಾವತಿ ವಿವರ |
|---|---|---|---|---|
| | | 92. | ನಂಜನಗೂಡು | |
| | | 93. | ಪಿರಿಯಾಪಟ್ಟಣ | |
| | | 94. | ಟಿ ನರಸೀಪುರ | |
| | | 95. | ಮೈಸೂರು ದಕ್ಷಿಣ | |
| 19 | ರಾಯಚೂರು | 96. | ದೇವದುರ್ಗ | ಮುಖ್ಯ ಲೆಕ್ಕಾಧಿಕಾರಿಗಳು, ಜಿಲ್ಲಾ ಪಂಚಾಯತ್, ರಾಯಚೂರು ಇವರು ವರ್ಗಾವಣೆ/ಬಡ್ತಿ ಹೊಂದಿದ ಪ್ರಯುಕ್ತ ಪ್ರಸ್ತುತ ಮುಖ್ಯ ಲೆಕ್ಕಾಧಿಕಾರಿಗಳು ಡಿಜಿಟಲ್ ಕೀ ಮ್ಯಾಪಿಂಗ್ ತಡವಾಗಿರುವುದರಿಂದ ತಾಲ್ಲೂಕುಗಳಿಗೆ ದಿನಾಂಕ 21.9.2020ರಂದು ಅನುದಾನ ಬಿಡುಗಡೆ ಮಾಡಲಾಗಿದೆ. ಅಡುಗೆ ಸಿಬ್ಬಂದಿ ಸಂಭಾವನೆ ಪಾವತಿ ಕಾರ್ಯ ಪ್ರಗತಿಯಲ್ಲಿರುತ್ತದೆ. |
| | | 97. | ಲಿಂಗಸುಗೂರು | |
| | | 98. | ಮಾನ್ವಿ | |
| | | 99. | ರಾಯಚೂರು | |
| | | 100. | ಸಿಂಧನೂರು | |
| 20 | ರಾಮನಗರ | 101. | ಮಾಗಡಿ | ಜಿಲ್ಲಾ ಹಂತದಿಂದ ತಾಲ್ಲೂಕು ಹಂತಕ್ಕೆ ಅನುದಾನ ಬಿಡುಗಡೆ ಮಾಡಲಾಗಿದೆ |
| | | 102. | ರಾಮನಗರ | |
| | | 103. | ಚನ್ನಪಟ್ಟಣ | |
| | | 104. | ಕನಕಪುರ | |
| 21 | ತುಮಕೂರು | 105. | ಚಿಕ್ಕನಾಯಕನಹಳ್ಳಿ | ಜಿಲ್ಲಾ ಹಂತದಿಂದ ತಾಲ್ಲೂಕು ಹಂತಕ್ಕೆ ಅನುದಾನವನ್ನು ಬಿಡುಗಡೆ ಮಾಡಲು ಕ್ರಮವಹಿಸಲಾಗುತ್ತಿದೆ. |
| | | 106. | ಗುಬ್ಬಿ | |
| | | 107. | ತುರುವೇಕೆರೆ | |
| | | 108. | ತಿಪಟೂರು | |
| | | 109. | ತುಮಕೂರು | |
| | | 110. | ಕುಣಿಗಲ್ | |
| | | 111. | ಕೊರಟಗೆರೆ | |
| | | 112. | ಮಧುಗಿರಿ | |
| | | 113. | ಪಾವಗಡ | |
| | | 114. | ಶಿರಾ | |
| 22 | ಉಡುಪಿ | 115. | ಕಾರ್ಕಳ | ಜಿಲ್ಲಾ ಹಂತದಿಂದ ತಾಲ್ಲೂಕು ಹಂತಕ್ಕೆ ಅನುದಾನವನ್ನು ಅನುದಾನವನ್ನು ಬಿಡುಗಡೆ ಮಾಡಲು ಕ್ರಮ ವಹಿಸಲಾಗುತ್ತಿದೆ. |
| | | 116. | ಕುಂದಾಪುರ | |
| | | 117. | ಉಡುಪಿ | |
| | | 118. | ಬೈಂದೂರು | |
| | | 119. | ಬ್ರಹ್ಮಾವರ | |
| 23 | ಉತ್ತರ ಕನ್ನಡ | 120. | ಕಾರವಾರ | ತಾಲ್ಲೂಕುಗಳಲ್ಲಿ ಬಿಲ್ಲುಗಳನ್ನು ತಯಾರಿಸಿ ಖಜಾನೆಗೆ ಸಲ್ಲಿಸಿರುತ್ತಾರೆ. |
| | | 121. | ಕುಮಟಾ | |
| | | 122. | ಹೊನ್ನಾವರ | |

| ಕ್ರಸಂ. | ಜಿಲ್ಲೆಯ ಹೆಸರು | ಕ್ರಸಂ. | ತಾಲ್ಲೂಕಿನ ಹೆಸರು | ಅಡುಗೆ ಸಿಬ್ಬಂದಿಗಳ ಸಂಭಾವನೆ ಪಾವತಿ ವಿವರ |
|---|---|---|---|---|
| | | 123. | ಭಟ್ಕಳ | ವಿಜಯಾ ಬ್ಯಾಂಕ್‌ದಿಂದ ಬ್ಯಾಂಕ್ ಆಫ್ ಬರೋಡಾ ಆದ ಕಾರಣ ಸುಮಾರು 30 ಅಡುಗೆಯವರ ಖಾತೆ ಸಂಖ್ಯೆ ಬ್ಯಾಂಕ್‌ನಿಂದ ಜನರೇಟ್ ಆಗಿರುವುದಿಲ್ಲ. ಕಾರಣ ಬಿಲ್ಲು ತಯಾರಿಸಲು ವಿಳಂಭವಾಗಿದ್ದು, ಬ್ಯಾಂಕ್ ಸಮಸ್ಯೆ ಬಗೆಹರಿಸಿ, ಅಡುಗ ಸಿಬ್ಬಂದಿಗಳ ಸಂಭಾವನೆ ಪಾವತಿಗೆ ಕ್ರಮವಹಿಸಲಾಗುವುದೆಂದು ಎಂದು ಸಹಾಯಕ ನಿರ್ದೇಶಕರು ಅಕ್ಷರ ದಾಸೋಹ ಭಟ್ಕಳ ರವರು ತಿಳಿಸಿರುತ್ತಾರೆ. |
| 24 | ವಿಜಯಪುರ | 124. | ಇಂಡಿ | ತಾಲ್ಲೂಕು ಹಂತದಲ್ಲಿ ಕೆ-2 ನಲ್ಲಿ ಬಿಲ್ಲು ಸಿದ್ದಪಡಿಸಿ ಟ್ರೆಜರಿಗೆ ಸಲ್ಲಿಸಲು ಕ್ರಮವಹಿಸಲಾಗುತ್ತಿದೆ |
| | | 125. | ಮುದ್ದೇಬಿಹಾಳ | |
| 25 | ಯಾದಗಿರಿ | 126. | ಯಾದಗಿರಿ | ಜಿಲ್ಲಾ ಹಂತದಿಂದ ತಾಲ್ಲೂಕು ಹಂತಕ್ಕೆ ಅನುದಾನ ಬಿಡುಗಡೆಯಾಗಿದ್ದು, ತಾಲ್ಲೂಕುಗಳಲ್ಲಿ ಕೆ-2 ಮೂಲಕ ಬಿಲ್ಲು ತಯಾರಿ ಕಾರ್ಯ ಪ್ರಗತಿಯಲ್ಲಿದೆ. |
| | | 127. | ಶಹಾಪುರ | |
| | | 128. | ಶೋರಾಪುರ | |

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1396
ಸದಸ್ಯರ ಹೆಸರು : ಶ್ರೀ ಹೂಲಗೇರಿ ಡಿ.ಎಸ್ (ಲಿಂಗಸುಗೂರು)
ಉತ್ತರಿಸಬೇಕಾದ ದಿನಾಂಕ : 24.09.2020
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು

| ಕ್ರ.ಸ | ಪ್ರಶ್ನೆ | ಉತ್ತರ |
|---|---|---|
| ಅ) | ಆರ್.ಎಂ.ಎಸ್.ಎ ಯೋಜನೆಯಡಿ ಲಿಂಗಸುಗೂರು ತಾಲ್ಲೂಕಿನಲ್ಲಿ ಮಂಜೂರಾಗಿದ್ದ ಶಾಲಾ ಕಟ್ಟಡ ಕಾಮಗಾರಿಗಳು ಸ್ಥಗಿತಗೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಬಂದಿದ್ದಲ್ಲಿ, ಆರ್.ಎಂ.ಎಸ್.ಎ ಯೋಜನೆಯಡಿ ಲಿಂಗಸುಗೂರು ತಾಲ್ಲೂಕಿಗೆ ಮಂಜೂರಾಗಿದ್ದ ಶಾಲಾ ಕಟ್ಟಡಗಳೇಷ್ಟು; ಸದರಿ ಮಂಜೂರು ಮಾಡಿದ ಶಾಲಾ ಕಟ್ಟಡ ಕಾಮಗಾರಿಗಳನ್ನು ಯಾವ ಕಾರಣಕ್ಕೆ ಸ್ಥಗಿತಗೊಳಿಸಲಾಗಿದೆ ಮತ್ತು ಯಾವಾಗ ಪ್ರಾರಂಭಿಸಲಾಗುವುದು? ಸಂಪೂರ್ಣ ವಿವರಗಳನ್ನು ಒದಗಿಸುವುದು) | ಆರ್.ಎಂ.ಎಸ್.ಎ ಯೋಜನೆಯಡಿ 2009-10 ಹಾಗೂ 2010-11 ರಲ್ಲಿ ಲಿಂಗಸುಗೂರು ತಾಲ್ಲೂಕಿನಲ್ಲಿ 21 ಕಾಮಗಾರಿಗಳು ಮಂಜೂರಾಗಿದ್ದು, ಎಲ್ಲಾ 21 ಕಾಮಗಾರಿಗಳು ಪೂರ್ಣಗೊಂಡಿರುತ್ತವೆ.(ಅನುಬಂಧ-1ರಲ್ಲಿ ಒದಗಿಸಲಾಗಿದೆ)<br><br>2013-14ರ ನಂತರ ಆರ್.ಎಂ.ಎಸ್.ಎ ಯೋಜನೆಯಡಿ ಮಂಜೂರಾಗಿರುವ ಈ ಕೆಳಕಂಡ ಕಾಮಗಾರಿಗಳು ಕೇಂದ್ರ ಸರ್ಕಾರದ ಮಾನವ ಸಂಪನ್ಮೂಲ ಮಂತ್ರಾಲಯದಿಂದ ಅನುದಾನ ಬಿಡುಗಡೆಯಾಗಿಲ್ಲದ ಕಾರಣದಿಂದ ಸ್ಥಗಿತಗೊಂಡಿರುತ್ತವೆ.<br><br>ಬಲವರ್ಧನೆ – 1 ಕಾಮಗಾರಿ: ಸ.ಪ್ರೌ.ಶಾ ಉರ್ದು ಮಸ್ಕಿ<br>ಉನ್ನತೀಕರಣ – 4 ಕಾಮಗಾರಿಗಳು: ಸ.ಪ್ರೌ.ಶಾಲೆ ಬನ್ನಿಗೋಳ್, ಸ.ಪ್ರೌ.ಶಾಲೆ ಘುಲಬಾವಿ, ಸ.ಪ್ರೌ.ಶಾಲೆ ಹಿರೇನಾಗನೂರು, ಸ.ಪ್ರೌ.ಶಾಲೆ ಕೋಟಾ<br><br>ಕೇಂದ್ರ ಸರ್ಕಾರದ ಅನುದಾನ ಬಿಡುಗಡೆಯಾದ ನಂತರ ಈ ಕಾಮಗಾರಿಗಳನ್ನು ಕೈಗೊಳ್ಳಲು ಕ್ರಮಕೈಗೊಳ್ಳಲಾಗುವುದು. |

ಇಪಿ 24 ಎಂಸಿಡಿ 2020

(ಎಸ್.ಸುರೇಶ್ ಕುಮಾರ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು

ಅನುಬಂಧ-1 1396

LIST OF COMPLETED WORKS TAKEN UP UNDER R.M.S.A IN LINGASUGUR TALUK, RAICHUR DISTRICT

| Sl. No. | Name of Work | Type |
|---|---|---|
| | **Strengthening Works** | |
| 1 | Govt P.U College Lingasugur | T-18 |
| 2 | Govt Junior College Mudgal | T-48 |
| 3 | Govt Composite High School Anwari | T-61 |
| 4 | Govt Composite High School Bayyapur | T-61 |
| 5 | Govt High School Chittapur | T-61 |
| 6 | Govt High School Maraldinni | T-61 |
| 7 | Govt High School Talekhan | T-61 |
| 8 | Govt P.U College (8-10) Nagarahal Lingasugur | T-61 |
| 9 | Govt P.U College Boys (8-10) Maski Lingasugur | T-61 |
| 10 | Govt P.U College (8-10) Sajjalagudda Lingasugur | T-64 |
| 11 | High School Section G.P.U Collage(Puc)Gurugunta | T-66 |
| 12 | Govt High School Khairawadagi | T-68 |
| 13 | Govt High School Yalagatta | T-74 |
| 14 | Govt Junior Collge Rodalabanda | T-79 |
| 15 | Govt Junior College Hutti | T-84 |
| | **Upgradation Works** | |
| 16 | G.H.P.S Chikkahesaruru | T-1 |
| 17 | G.H.P.S Kachapur | T-1 |
| 18 | G.H.P.S Makapur | T-1 |
| 19 | Ghups Adavibhavi Tanda | T-1 |
| | **Girls Hostel** | |
| 20 | Biyyapura | GH |
| | **Adarsha Vidyalaya** | |
| 21 | Karadakal | AV |

State Project Engineer
Samagra Shikshana - Karnataka

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1402 |
| ಮಾನ್ಯ ಸದಸ್ಯರ ಹೆಸರು | ಶ್ರೀ. ಸುಕುಮಾರ್ ಶೆಟ್ಟಿ (ಬೈಂದೂರು) |
| ಉತ್ತರಿಸಬೇಕಾದ ದಿನಾಂಕ | 24-09-2020 |
| ಉತ್ತರಿಸುವ ಸಚಿವರು | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಕುಂದಾಪುರ ಮತ್ತು ಬೈಂದೂರು ತಾಲ್ಲೂಕು ವ್ಯಾಪ್ತಿಯ ತಾಲ್ಲೂಕು ಆಸ್ಪತ್ರೆ, ಸಮುದಾಯ ಆಸ್ಪತ್ರೆಗಳಲ್ಲಿ ಮಂಜೂರಾದ ಹುದ್ದೆಗಳ ಸಂಖ್ಯೆ ಎಷ್ಟು; ಹಾಗೂ ಇರುವ ಹುದ್ದೆಗಳ ಸಂಖ್ಯೆ ಎಷ್ಟು (ಆಸ್ಪತ್ರೆವಾರು, ಹುದ್ದೆವಾರು ವಿವರ ನೀಡುವುದು) | ಕುಂದಾಪುರ ಮತ್ತು ಬೈಂದೂರು ತಾಲ್ಲೂಕು ವ್ಯಾಪ್ತಿಯ ತಾಲ್ಲೂಕು ಆಸ್ಪತ್ರೆ, ಸಮುದಾಯ ಆಸ್ಪತ್ರೆಗಳಲ್ಲಿ ಮಂಜೂರಾದ ಹುದ್ದೆಗಳ ಸಂಖ್ಯೆ ಹಾಗೂ ಕಾರ್ಯನಿರತ ಹುದ್ದೆಗಳ ಆಸ್ಪತ್ರೆವಾರು, ಹುದ್ದೆವಾರು ವಿವರಗಳನ್ನು ಅನುಬಂಧ-1ರಲ್ಲಿ ನೀಡಲಾಗಿದೆ. |
| ಆ | ಸದರಿ ಖಾಲಿ ಇರುವ ಹುದ್ದೆಗಳನ್ನು ಭರ್ತಿಮಾಡಲು ಸರ್ಕಾರ ಕೈಗೊಂಡ ಕ್ರಮವೇನು; | 1. ತಜ್ಞ ವೈದ್ಯರು, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು ಹಾಗೂ ದಂತ ಆರೋಗ್ಯಾಧಿಕಾರಿಗಳ ಹುದ್ದೆಗಳನ್ನು ಭರ್ತಿಮಾಡಲು ಈಗಾಗಲೇ ದಿನಾಂಕ:10.09.2020 ರಂದು ವಿಶೇಷ ನೇಮಕಾತಿ ಸಮಿತಿಯಿಂದ ಭರ್ತಿಮಾಡಲು ಅಧಿಸೂಚನೆ ಹೊರಡಿಸಲಾಗಿದ್ದು, ಅರ್ಹ ಅಭ್ಯರ್ಥಿಗಳಿಂದ ಆನ್-ಲೈನ್ ಮೂಲಕ ಅರ್ಜಿಗಳನ್ನು ಆಹ್ವಾನಿಸಲಾಗಿದ್ದು ನೇಮಕಾತಿ ಪ್ರಕ್ರಿಯೆ ಚಾಲ್ತಿಯಲ್ಲಿದೆ.<br><br>2. 883 ಶುಶ್ರೂಷಕರು (ಡಿಪ್ಲಮೋ) ಹುದ್ದೆಗಳಿಗೆ ದಿನಾಂಕ 16.07.2020 ರಲ್ಲಿ ಅಂತಿಮ ಆಯ್ಕೆಪಟ್ಟಿಯನ್ನು ಪ್ರಕಟಿಸಿದ್ದು, ಆಯ್ಕೆಯಾದ ಅಭ್ಯರ್ಥಿಗಳಿಗೆ ದಿನಾಂಕ:14.09.2020 ರಿಂದ 16.09.2020 ರವರೆಗೆ ಸ್ಥಳ ಆಯ್ಕೆಯ ಕೌನ್ಸಿಲಿಂಗ್ ನಡೆಸಲಾಗಿದ್ದು, ಪೊಲೀಸ್ ಪೂರ್ವಾಪರ, ಸಿಂಧುತ್ವ ಹಾಗೂ ಇನ್ನಿತರ ಎಲ್ಲಾ ವರದಿಗಳು ಸ್ವೀಕೃತವಾಗಿರುವ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶ ನೀಡಲು ಕ್ರಮ ವಹಿಸಲಾಗುತ್ತಿದೆ.<br><br>3. ಕಲ್ಯಾಣ ಕರ್ನಾಟಕ ಪ್ರದೇಶದಲ್ಲಿ ಖಾಲಿ ಇರುವ 293 ವಿವಿಧ ವೃಂದದ ಅರೆ-ವೈದ್ಯಕೀಯ ಹುದ್ದೆಗಳನ್ನು ಭರ್ತಿಮಾಡಲು ಹಾಗೂ ಉಳಿಕೆ ಮೂಲ ವೃಂದದಲ್ಲಿ |

| | | |
|---|---|---|
| | | ಖಾಲಿ ಇರುವ ಫಾರ್ಮಸಿಸ್ಟ್-400, ಕ್ಷ-ಕಿರಣ ತಂತ್ರಜ್ಞರು-08 ಮತ್ತು ಕಿರಿಯ ಪ್ರಯೋಗಶಾಲಾ ತಂತ್ರಜ್ಞರು-150 ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿಮಾಡಲು ಕರಡು ವಿಶೇಷ ನೇಮಕಾತಿ ನಿಯಮಗಳನ್ನು ರಚಿಸಲಾಗಿದ್ದು, ಸಚಿವ ಸಂಪುಟದ ಅನುಮೋದನೆ ಪಡೆದುಕೊಂಡು ನೇಮಕಾತಿ ಪ್ರಕ್ರಿಯೆಯನ್ನು ಚಾಲನೆಗೊಳಿಸಲಾಗುವುದು. |
| ಇ | ಬೈಂದೂರು ತಾಲ್ಲೂಕಾಗಿ ಘೋಷಣೆಯಾಗಿದ್ದು ಬೈಂದೂರಿನಲ್ಲಿನ ಸಮುದಾಯ ಆರೋಗ್ಯ ಕೇಂದ್ರವನ್ನು ತಾಲ್ಲೂಕು ಸಾರ್ವಜನಿಕ ಆಸ್ಪತ್ರೆಯಾಗಿ ಮೇಲ್ದರ್ಜೆಗೇರಿಸುವ ಪ್ರಸ್ತಾವನೆ ಯಾವ ಹಂತದಲ್ಲಿದೆ? | ಬೈಂದೂರಿನಲ್ಲಿನ ಸಮುದಾಯ ಆರೋಗ್ಯ ಕೇಂದ್ರವನ್ನು ತಾಲ್ಲೂಕು ಸಾರ್ವಜನಿಕ ಆಸ್ಪತ್ರೆಯಾಗಿ ಮೇಲ್ದರ್ಜೆಗೇರಿಸುವ ಪ್ರಸ್ತಾವನೆ ಪರಿಶೀಲನೆಯಲ್ಲಿದೆ. |

**ಆಕುಕ 51 ಹೆಚ್‌ಎಸ್‌ಡಿ 2020**

(ಬಿ. ಶ್ರೀರಾಮುಲು)

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು**

